# ಕೊರವ, ಲಮಾಣಿ, ಜಾತಿಗೇರ ಸಮುದಾಯ ಕೇಂದ್ರಿತ ಮೂರು ಕಾದಂಬರಿಗಳ ಅಧ್ಯಯನ

(ಶಾಂತರಸರ 'ಸ್ವಾಗೌಡಸಾನಿ', ಚಂಬಣ್ಣ ಅಮರಚಿಂತರ 'ಕುರುಮಯ್ಯ' ಮತ್ತು ಅಂಕುಶದೊಡ್ಡಿ ಮಲ್ಲಿಕಾರ್ಜುನ ಹಿರೇಮಠರ 'ಹಬನ' ಕಾದಂಬರಿಗಳನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್., ಪದವಿಗೆ ಸಲ್ಲಿಸುತ್ತಿರುವ ಸಂಪ್ರಬಂಧ)

ನೋಂದಣಿ ಸಂಖ್ಯೆ : ೧೫೦೧೦೧೦೬೦೦೦೨



ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೧೫-೧೬

# ಕೊರವ, ಲಮಾಣಿ, ಜಾತಿಗೇರ ಸಮುದಾಯ ಕೇಂದ್ರಿತ ಮೂರು ಕಾದಂಬರಿಗಳ ಅಧ್ಯಯನ

(ಶಾಂತರಸರ 'ಸಣ್ಣಗೌಡಸಾನಿ', ಜಂಬಣ್ಣ ಅಮರಚಿಂತರ 'ಕುರುಮಯ್ಯ ಮತ್ತು ಅಂಕುಶದೊಡ್ಡಿ', ಮಲ್ಲಿಕಾರ್ಜುನ ಹಿರೇಮಠರ 'ಹವನ' ಕಾದಂಬರಿಗಳನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧ)

ನೋಂದಣಿ ಸಂಖ್ಯೆ : ೧೫೦೧೦೧೦೩೦೦[illegible]೩



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

೨೦೧೫-೧೬

# ಪರಿವಿಡಿ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವೈಧಾನಿಕತೆ

ಪ್ರವೇಶಿಕೆ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ಮಹತ್ವ

೧.೩. ಅಧ್ಯಯನದ ವ್ಯಾಪ್ತಿ ಮತ್ತು ವೈಧಾನಿಕತೆ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವೈಧಾನಿಕತೆ

**ಪ್ರವೇಶಿಕೆ**

ಭಾರತದ ವರ್ಗ ಅಸಮಾನತೆಯಿಂದ ಹಲವು ಸಮುದಾಯಗಳು ಸಮಾಜದ ಅಂಚಿಗೆ ತಳ್ಳಲ್ಪಟ್ಟಿವೆ. ಇಲ್ಲಿನ ಜಾತಿವ್ಯವಸ್ಥೆಯು ಈ ಸಮುದಾಯಗಳನ್ನು ತಿರಸ್ಕಾರಕ್ಕೆ ಗುರಿಪಡಿಸಿ ಇವರನ್ನು ಊರ ಹೊರಗೆ, ಕಾಡು-ಮೇಡುಗಳಲ್ಲಿ ಬಾಳುವೆ ನಡೆಸುವಂತೆ ಮಾಡಿದೆ. ಇಂತಹ ಅಲಕ್ಷಿತ ಸಮುದಾಯಗಳನ್ನು ಆದಿಮ ಜನಾಂಗಗಳು, ಬುಡಕಟ್ಟು ಜನಾಂಗಗಳೆಂದು ಗುರುತಿಸಲಾಗಿದೆ. ಈ ಸಮುದಾಯಗಳು ಅವರದೇ ಆದ ಸಾಂಸ್ಕೃತಿಕ ಚಹರೆ ಹಾಗೂ ವೃತ್ತಿಯನ್ನು ಅವಲಂಬಿಸಿರುತ್ತವೆ. ಈ ಜನಾಂಗಗಳು ಸಮಾಜದಲ್ಲಿ ತಿರಸ್ಕಾರಕ್ಕೆ ಗುರಿಯಾಗಿರುವ ಕಾರಣ ತಮ್ಮದೇ ಆದ ಬದುಕನ್ನು ರೂಪಿಸಿಕೊಳ್ಳಲು ಕೆಲವರು ಊರ ಹೊರಗೆ ತಮ್ಮ ನೆಲೆಗಳನ್ನು ಕಂಡುಕೊಂಡರೆ, ಮತ್ತೆ ಕೆಲವರು ನಗರವಾಸದಿಂದ ದೂರ ಸರಿದು ಅರಣ್ಯಗಳಲ್ಲಿ ವಾಸಿಸಲು ಪ್ರಾರಂಭಿಸಿದರು. ಊರ ಹೊರಗೆ ಉಳಿದ ಆದಿಮ ಜನಾಂಗಗಳು ಉನ್ನತ ವರ್ಗಗಳ ಸೇವೆ ಮಾಡುತ್ತ ತಮ್ಮ ಜೀವನವನ್ನು ಸಾಗಿಸುತ್ತ ಬಂದರು. ಆದರೆ ತಮ್ಮ ಸ್ವಾಭಿಮಾನದ ಬದುಕಿಗಾಗಿ ನಗರಸಂಸ್ಕೃತಿಯನ್ನು ತೊರೆದ ಬುಡಕಟ್ಟುಗಳು ಅರಣ್ಯಪ್ರದೇಶದಲ್ಲಿ ನೆಲೆಯೂರಿ, ಪರಿಸರದ ಉತ್ಪನ್ನಗಳನ್ನು ಉಪಜೀವನಕ್ಕೆ ಬಳಸಿಕೊಳ್ಳುತ್ತ ಸಾವಿರಾರು ವರುಷಗಳಿಂದ ಕಾಡು-ಮೇಡುಗಳಲ್ಲಿಯೇ ಜೀವಿಸುತ್ತ ಉಳಿದಿವೆ. ಆದರೆ ಬ್ರಿಟಿಷರ ವಸಾಹತುಶಾಹಿ ಆಡಳಿತ ಆರಂಭವಾದ ಮೇಲೆ ಅನೇಕ ಬುಡಕಟ್ಟುಗಳು ಅತಂತ್ರ ಸ್ಥಿತಿಗೆ ತಲುಪಿದವು. ಕಾಡಿನಲ್ಲಿ ಜೀವನ ಆರಂಬಿಸಿ, ಕಾಡನ್ನೇ ಅವಲಂಬಿಸಿ ಜೀವನ ಸಾಗಿಸುತ್ತಿದ್ದ ಇವರನ್ನು ಬ್ರಿಟಿಷರು ತಮ್ಮ ಅರಣ್ಯನೀತಿಯಿಂದ ಇವರನ್ನು ಒಕ್ಕಲೆಬ್ಬಿಸಲು ಪ್ರಾರಂಭಿಸಿದರು.

ಇದರಿಂದ ಈ ಬುಡಕಟ್ಟುಗಳು ತಮ್ಮ ಪಾರಂಪರಿಕ ಬದುಕನ್ನು ಕಳೆದುಕೊಂಡು ಅತಂತ್ರ ಸ್ಥಿತಿಯನ್ನು ತಲುಪಿದವು. ಕಾಡುಗಳಿಂದ ಪಲಾಯನಗೊಂಡ ಈ ಜನಾಂಗಗಳು ಮತ್ತೆ ನಗರವನ್ನು ತಲುಪಿದಾಗಲೂ ಜಾತಿವ್ಯವಸ್ಥೆಯ ಬಂಧನದಲ್ಲಿ ಸಿಲುಕಿಕೊಳ್ಳುವಂತಾಯಿತು. ತಮ್ಮ ಮೂಲಕಸುಬುಗಳನ್ನು ತೊರೆಯುವುದು ಅನಿವಾರ್ಯವಾದಾಗ ಇವರು ಊರು, ಪಟ್ಟಣ,

ನಗರಗಳಲ್ಲಿ ಅಲೆಯುವ, ಭಿಕ್ಷೆ ಬೇಡುವಂತಹ ಹಂತವನ್ನು ತಲುಪಿದರು. ಆದರೂ ಈ ಬಗೆಯ ಬುಡಕಟ್ಟು ಸಮುದಾಯಗಳು ಇನ್ನೂ ಜೀವಂತವಾಗಿದ್ದು ಆಧುನಿಕತೆಯ ಸೆಳವಿಗೆ ಬಿದ್ದು, ತಮ್ಮದೇ ಆದ ರೀತಿಯಲ್ಲಿ ಜೀವನ ಸಾಗಿಸುತ್ತ, ಇಂದಿಗೂ ತಮ್ಮ ಸಾಂಸ್ಕೃತಿಕ ಕುರುಹು ಮತ್ತು ಚಹರೆಗಳನ್ನು ಉಳಿಸಿಕೊಂಡಿವೆ. ಈ ಚಹರೆಗಳನ್ನು ಇದೇ ಸಮುದಾಯಗಳಿಂದ ಬಂದಂತಹ ನಮ್ಮ ಕಥನಕಾರರು ಮತ್ತು ಲೇಖಕರು ಜೀವಂತಿಕೆಯ ನೆಲೆಯಲ್ಲಿ ಅಭಿವ್ಯಕ್ತಿಸಲು ಪ್ರಯತ್ನಿಸಿರುವುದು ಕಂಡುಬರುತ್ತದೆ.

ಆಧುನಿಕ ಕನ್ನಡ ಸಾಹಿತ್ಯದ ನವೋದಯ, ಪ್ರಗತಿಶೀಲ, ನವ್ಯಸಾಹಿತ್ಯ ಪ್ರಕಾರಗಳಲ್ಲಿ ರಾಷ್ಟ್ರವಾದದ ಪರಿಕಲ್ಪನೆ, ಆದರ್ಶ, ಆಧ್ಯಾತ್ಮಿಕತೆ, ಪ್ರಕೃತಿ ಮತ್ತು ಸೌಂದರ್ಯ, ರಂಜನೀಯತೆಗಳೇ ಪ್ರಮುಖವಾಗಿದ್ದವು. ಆದರೆ ೮೦ರ ದಶಕದ ವೇಳೆಗೆ ಜೀವ ತಳೆದ ದಲಿತ-ಬಂಡಾಯ ಸಾಹಿತ್ಯವು ಈ ಹಿಂದಿನ ಆಶಯಗಳಿಗೆ ಭಿನ್ನ ನೆಲೆಯಲ್ಲಿ ತನ್ನ ಧೋರಣೆಗಳನ್ನು ತಳೆಯಿತು. ಈ ಕಾಲಘಟ್ಟದಲ್ಲಿ ರೂಪಗೊಂಡ ಸಾಹಿತ್ಯವು ಜನಸಾಮಾನ್ಯರ ನೋವು-ನಲಿವು, ಸ್ವತಂತ್ರ ಬದುಕು, ಶೋಷಣೆಯ ವಿರುದ್ಧ ದನಿ ಎತ್ತುವ ನೆಲೆಯಲ್ಲಿ ಬೆಳೆದುಬಂದಿದೆ. ತಳಸಮುದಾಯಗಳ ಜೀವನ ಕ್ರಮವು ಇಲ್ಲಿಯ ಕಾದಂಬರಿಯ ವಸ್ತುವಾಗಿದೆ. ಇದು ಬಂಡಾಯ ಸಾಹಿತ್ಯದ ವಿಶೇಷತೆ. ದಲಿತ ಬಂಡಾಯದ ಸಾಹಿತ್ಯ ಉದ್ದೇಶವೆಂದರೆ ಸಮಾಜದಿಂದ ನಿರ್ಲಕ್ಷ್ಯಕ್ಕೆ ಒಳಪಟ್ಟಿರುವ ಹಾಗೂ ಸರಕಾರದ ಮೂಲಸೌಕರ್ಯದಿಂದ ವಂಚಿತರಾಗಿರುವ ಆದಿಮ ಜನಾಂಗಗಳು, ಬುಡಕಟ್ಟು, ಆದಿವಾಸಿ, ಅಲೆಮಾರಿಗಳ ಜೀವನ ಉಪಯೋಗಕ್ಕಾಗಿ ಅಗತ್ಯವಿರುವ ಮೂಲಸೌಕರ್ಯಗಳಾದ ಮನೆ, ಶಿಕ್ಷಣ, ಜಮೀನು ನೀಡಿ ಇವರನ್ನು ಜೀತಮುಕ್ತರನ್ನಾಗಿ ಮಾಡಿ ಅವರನ್ನು ಸ್ವತಂತ್ರಗೋಳಿಸಿ ಸ್ವಯಿಚ್ಛೆ, ಸಹಬಾಳ್ವೆ, ಸ್ವಹಿತಾಸಕ್ತಿಯ ನೆಮ್ಮದಿಯ ಜೀವನವನ್ನು ಕಟ್ಟಿಕೊಡುವುದು. ದಲಿತ-ಬಂಡಾಯ ಸಾಹಿತ್ಯದ ಲೇಖಕರು ಮಹತ್ವಪೂರ್ಣವಾದ ಧ್ಯೇಯ ಮತ್ತು ಗುರಿಯನ್ನು ಇಟ್ಟುಕೊಂಡು, ಇವುಗಳನ್ನು ತಮ್ಮ ಕಾದಂಬರಿಗಳಲ್ಲಿ ವ್ಯಕ್ತಪಡಿಸುತ್ತ ಬಂದಿದ್ದಾರೆ. ಇಂತಹ ದಲಿತ ಬಂಡಾಯ ಸಾಹಿತ್ಯದಲ್ಲಿ ಜನಾಂಗೀಯ ಅಧ್ಯಯನ, ಸಂಶೋಧನೆ, ಇತಿಹಾಸ, ಎಲ್ಲವುಗಳನ್ನು ಒಳಗೊಂಡ ನೂತನ ಸ್ವರೂಪವನ್ನು ಸಾಹಿತ್ಯವು ಮೂಡಿಸಿತು. ಈ ಸಾಹಿತ್ಯ ಪ್ರಕಾರದಲ್ಲಿ ಕಂಡುಬರುವ ಪ್ರಮುಖ ಲೇಖಕರು ತಮ್ಮ ಸುತ್ತಮುತ್ತಲಿನ ಪರಿಸರದಲ್ಲಿ ನಡೆದ ಘಟನೆಗಳನ್ನು ತಮ್ಮ ಬರವಣಿಗೆಯ ವಸ್ತುವಾಗಿಸಿಕೊಂಡು ಸಾಹಿತ್ಯ ಕೃಷಿ ಮಾಡುತ್ತ ಬಂದಿದ್ದಾರೆ.

ಕನ್ನಡ ಸಾಹಿತ್ಯವನ್ನು ಅಧ್ಯಯನದ ದೃಷ್ಟಿಯಿಂದ ಪ್ರಾಂತ್ಯವಾರು ವಿಂಗಡಿಸಿಕೊಂಡು ಬಂದಿರುವುದು ನಮಗೆ ಕಂಡುಬರುತ್ತದೆ. ಇಂತಹ ಪ್ರಾಂತ್ಯಗಳಲ್ಲಿ ಹೈದರಾಬಾದ್ ಕರ್ನಾಟಕವು ಒಂದು ವಿಶಿಷ್ಟತೆಯಾಗಿ ಕಂಡುಬರುತ್ತದೆ. ಈ ಪ್ರಾಂತ್ಯವು ಕನ್ನಡ ಸಾಹಿತ್ಯಕ್ಕೆ ಪ್ರಾಚೀನ

ಕಾಲದಿಂದಲೂ ವಿಶಿಷ್ಟ ಕೊಡುಗೆಯನ್ನು ನೀಡುತ್ತ ಬಂದಿದೆ. ಕನ್ನಡ ಸಾಹಿತ್ಯಕ್ಕೆ ಆರಂಭಿಕ ಕೊಡುಗೆಯಾದ ಕವಿರಾಜಮಾರ್ಗದಿಂದ ಹಿಡಿದು ಇತ್ತೀಚಿನ ತತ್ವಪದಗಳವರೆಗೂ ಸಾಕಷ್ಟು ಸಾಹಿತ್ಯವು ಈ ಭಾಗದಲ್ಲಿ ಜನ್ಮ ತಾಳಿದೆ. ಹಾಗೆಯೇ ದಲಿತ-ಬಂಡಾಯ ಸಾಹಿತ್ಯಕ್ಕೆ ಈ ಭಾಗದ ಕೊಡುಗೆಯು ಅಭೂತಪೂರ್ವವಾದುದು. ಕನ್ನಡ ಸಾಹಿತ್ಯದ ಕಾದಂಬರಿ ಕ್ಷೇತ್ರಕ್ಕೆ ಈ ಭಾಗದ ಕೊಡುಗೆ ಈ ಮುಂದಿನಂತಿದೆ;

| **ಕಾದಂಬರಿಕಾರರು** | **ಕಾದಂಬರಿ** | **ಸಮುದಾಯ** |
|---|---|---|
| ವೀರಪ್ಪ ಮೊಯಿಲಿ | ಕೊಟ್ಟ | ಕೊರವ |
| ಕೃಷ್ಣಮೂರ್ತಿ ಹನೂರು | ಬಾರೋ ಗೀಜಗನೆ | ಕೀಳ್ಳೆಕ್ಯಾತ |
| ರಾಘವೇಂದ್ರ ಪಾಟೀಲ | ತೇರು | ಗೊಂದಲಿಗ |
| ಗೀತಾನಾಗಭೂಷಣ | ಮಾಪುರ ತಾಯಿಯ ಮಕ್ಕಳು | ಜೋಗತಿ |
| ಜಂಬಣ್ಣ ಅಮರಚಿಂತ | ಕುರುಮಯ್ಯ ಮತ್ತು ಅಂಕುಶದೊಡ್ಡಿ | ಕೊರವ |
| ಮಲ್ಲಿಕಾರ್ಜುನ ಹಿರೇಮಠ | ಹವನ | ಲಂಬಾಣಿ |
| ಶಾಂತರಸ | ಸಣ್ಣಗೌಡಸಾನಿ | ಜಾತಿಗೇರ |

ಈ ಮೇಲೆ ಪಟ್ಟಿ ಮಾಡಿರುವ ಪ್ರಮುಖ ಕಾದಂಬರಿಗಳು ಅಸ್ಪೃಶ್ಯರು, ಅಲೆಮಾರಿ ಮತ್ತು ಅರೆಅಲೆಮಾರಿ ಸಮುದಾಯಗಳನ್ನು ಪ್ರತಿನಿಧಿಸುತ್ತವೆ. ಈ ಸಮುದಾಯಗಳು ಆಧುನಿಕ ಕಾಲದಲ್ಲಿ ತಮ್ಮ ಪಾರಂಪರಿಕ ಜೀವನಶೈಲಿಯನ್ನು ಬದಲಾಯಿಸಿಕೊಳ್ಳಬೇಕಾದ ಒತ್ತಡಗಳು ಹಾಗೂ ಅನಿವಾರ್ಯತೆಗಳು ಈ ಕಾದಂಬರಿಗಳ ಪ್ರಮುಖ ಆಶಯವಾಗಿವೆ. ಹಾಗೆಯೇ ನೂತನ ಜೀವನ ಶೈಲಿಗೆ ಒಗ್ಗಿಕೊಳ್ಳುವ ಸಂದರ್ಭದಲ್ಲಿ ಎದುರಾಗುವ ಗೊಂದಲ, ಸಂಕಷ್ಟ ಹಾಗೂ ಸಾಮಾಜಿಕ ಸಂಘರ್ಷಗಳನ್ನು ಇಲ್ಲಿ ಕಾದಂಬರಿಕಾರರು ಎತ್ತಿಹಿಡಿಯುವ ಪ್ರಯತ್ನ ಮಾಡಿರುವುದನ್ನು ಗುರುತಿಸಬಹುದಾಗಿದೆ. ಬದಲಾದ ಸಾಮಾಜಿಕ ವ್ಯವಸ್ಥೆಯಲ್ಲಿ ತಮ್ಮ ಪಾರಂಪರಿಕ ಬದುಕು, ಸಾಮಾಜಿಕ-ಧಾರ್ಮಿಕ ಹಾಗೂ ರಾಜಕೀಯ ಹಕ್ಕುಗಳನ್ನು ಉಳಿಸಿಕೊಳ್ಳುವ ಬಗೆಯನ್ನು ಮೇಲಿನ ಕಾದಂಬರಿಗಳು ಚಿತ್ರಿಸುತ್ತವೆ.

ಇಂತಹ ಜನಾಂಗೀಯ ಅಧ್ಯಯನಗಳು ಕಲೆಯ ಚೌಕಟ್ಟಿನಲ್ಲಿ ಅರಳಿನಿಂತು ಹೊಸದಾದ ವಿನ್ಯಾಸ ಮಾರ್ಗ ಮತ್ತು ಸೃಜನಶೀಲತೆಯಲ್ಲಿ ಸಮುದಾಯದ ಒಟ್ಟು ಸಾಂಸ್ಕೃತಿಕ ನೆಲೆಯನ್ನು ಗುರುತಿಸುವ ಕಾರ್ಯವನ್ನು ಈ ಭಾಗದ ಲೇಖಕರು ಮಾಡಿದ್ದಾರೆ. ಇದನ್ನು ಆಧಾರವಾಗಿಟ್ಟುಕೊಂಡು ಪ್ರಸ್ತುತ ಅಧ್ಯಯನಕ್ಕೆ ಮೂರು ಅಲೆಮಾರಿ ಸಮುದಾಯಗಳನ್ನು ಕೇಂದ್ರವಾಗಿಟ್ಟುಕೊಡು

ಮೂಡಿಬಂದಿರುವ ಕಾದಂಬರಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಪ್ರಸ್ತುತ ಕಾದಂಬರಿಗಳಾದ ಶಾಂತರಸರ ಸಣ್ಣಗೌಡಸಾನಿಯು ಜಾತಿಗೇರ ಜನಾಂಗವನ್ನು, ಜಂಬಣ್ಣ ಅಮರಚಿಂತರ ಕುರುಮಯ್ಯ ಮತ್ತು ಅಂಕುಶದೊಡ್ಡಿಯು ಕೊರವ ಜನಾಂಗವನ್ನು, ಮಲ್ಲಿಕಾರ್ಜುನ ಹಿರೆಮಠರ ಹವನ ಕಾದಂಬರಿಯು ಲಂಬಾಣಿ ಜನಾಂಗವನ್ನು ಪ್ರತಿನಿಧಿಸುತ್ತದೆ. ಇವುಗಳನ್ನು ಆಧಾರವಾಗಿಟ್ಟುಕೊಂಡು ಈ ಮೂರು ಭಿನ್ನ ಸಮುದಾಯಗಳನ್ನು ಕುರಿತ ಕಾದಂಬರಿಗಳ ಅಧ್ಯಯನ ಮಾಡಲಾಗುವುದು.

### ಅಧ್ಯಯನದ ಉದ್ದೇಶ

೧. ಸಾಹಿತ್ಯ ವಾಸ್ತವವನ್ನು ತನ್ನದೇ ಆದ ನೆಲೆಯಲ್ಲಿ ನಿರೂಪಿಸಿಕೊಳ್ಳುತ್ತದೆ. ಇದುವರೆಗೂ ಜನಾಂಗೀಯ ಅಧ್ಯಯನಗಳು ನಡೆದಿವೆಯಾದರೂ ಕಾದಂಬರಿಯ ನೆಲೆಯಲ್ಲಿ ಜನಾಂಗೀಯ ಅಧ್ಯಯನಗಳು ನಡೆದಿರುವುದು ಕಡಿಮೆಯಾಗಿದೆ. ಈ ಮೇಲೆ ತಿಳಿಸಿದ ಮೂರು ಕಾದಂಬರಿಗಳ ಮೇಲೆ ಇದುವರೆಗೂ ಜನಾಂಗೀಯ ನೆಲೆಯ ಯಾವುದೇ ಅಧ್ಯಯನಗಳು ನಡೆದಿರುವುದಿಲ್ಲ. ಆದ್ದರಿಂದ ಜನಾಂಗೀಯ ನೆಲೆಯಲ್ಲಿ ಈ ಮೂರು ಕಾದಂಬರಿಗಳನ್ನು ಅಧ್ಯಯನ ಮಾಡುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

೨. ಹೈದರಾಬಾದ್ ಕರ್ನಾಟಕವು ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಅತ್ಯಂತ ಹಿಂದುಳಿದ ಪ್ರದೇಶವಾಗಿದೆ. ಇದಕ್ಕೆ ಕಾರಣವೂ ಇದೆ. ಈ ಕಾರಣಗಳನ್ನು ಈ ಭಾಗದ ಹಲವರು ಕಾದಂಬರಿಕಾರರು ತಮ್ಮ ಕಾದಂಬರಿಯ ಮೂಲಕ ಅನಾವರಣಗೊಳಿಸುತ್ತ ಬಂದಿದ್ದಾರೆ. ಆದ್ದರಿಂದ ಈ ಆಯ್ದ ಕಾದಂಬರಿಗಳ ಹಿನ್ನೆಲೆಯಲ್ಲಿ ಇಲ್ಲಿನ ಪ್ರಾದೇಶಿಕತೆಯನ್ನು ಅಧ್ಯಯನ ಮಾಡುವುದು ಪ್ರಸ್ತುತ ಕಿರುಪ್ರಬಂಧದ ಉದ್ದೇಶವಾಗಿದೆ.

೩. ಹೈದರಾಬಾದ್ ಕರ್ನಾಟಕವು ಹಲವು ಧರ್ಮಗಳು, ಧಾರ್ಮಿಕ ವ್ಯಕ್ತಿಗಳು, ಸಂತರು, ತತ್ವಪದಕಾರರು ಜನಿಸಿದ ನಾಡು. ಆದರೆ ಹೆಚ್ಚು ಅರಾಜಕತೆಯು ನೆಲೆಸಿರುವುದು ಕೂಡ ಈ ಭಾಗದಲ್ಲಿಯೇ. ಅಸಮಾನತೆ, ಜಾತೀಯತೆಯಂತಹ ಮಾರಕ ನಿಲುವುಗಳು ಕೂಡ ಇಲ್ಲಿ ಪ್ರಬಲವಾಗಿ ನೆಲೆಯೂರಿವೆ. ಇದಕ್ಕೆ ಕಾರಣ ಕಂಡುಹಿಡಿಯುವ ಉದ್ದೇಶದಿಂದ ಈ ಭಾಗದ ಕಾದಂಬರಿಗಳನ್ನು ಅಧ್ಯಯನ ಮಾಡಲಾಗುವುದು.

೪. ಜಾತಿಕೇಂದ್ರಿತ ನೆಲೆಯಲ್ಲಿ ಕಾದಂಬರಿಗಳನ್ನು ಅಧ್ಯಯನ ಮಾಡುವುದರಿಂದ ಈ ಜನಾಂಗಗಳ ವಾಸ್ತವ ಬದುಕನ್ನು ಅರಿಯಲು ಸಹಕಾರಿಯಾಗುತ್ತದೆ. ಹಾಗೆಯೇ ಇಲ್ಲಿ ಆಯ್ದುಕೊಂಡಿರುವ ಕಾದಂಬರಿಯ ವಸ್ತು ಹೈದರಾಬಾದ್ ಪ್ರಾಂತ್ಯದ ಜಾತೀಯತೆಯನ್ನು ಜೀವಂತವಾಗಿ ಕಟ್ಟಿಕೊಡುತ್ತದೆ. ಹಾಗೆಯೇ ಈ ಕಾದಂಬರಿಕಾರರು ಇದೇ ಭಾಗದವರಾಗಿದ್ದಾರೆ. ಆದ್ದರಿಂದ ಇವರು ಉಳಿದ ಕಾದಂಬರಿಕಾರರಿಗಿಂತ ಹೇಗೆ ಭಿನ್ನವಾಗಿ ತನ್ನ ಪ್ರಾಂತ್ಯದ

ತಳಸಮುದಾಯದ ಜೀವನವನ್ನು ಕಟ್ಟಿಕೊಟ್ಟಿದ್ದಾರೆ ಎಂಬುದನ್ನು ಲೇಖಕರ ಕೇಂದ್ರಿತ ನೆಲೆಯಲ್ಲಿ ಅಧ್ಯಯನ ಮಾಡುವ ಉದ್ದೇಶವನ್ನು ಇಲ್ಲಿ ಕೈಗೊಳ್ಳಲಾಗಿದೆ.

೫. ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಕಂಡುಬರುವ ತಳಸಮುದಾಯಗಳ ಜೀವನಕ್ರಮ, ಈ ಜನಾಂಗವು ಅನುಭವಿಸುತ್ತಿರುವ ಶೋಷಣೆ, ಅನಕ್ಷರತೆ, ಬಡತನ, ನಿರುದ್ಯೋಗದಂತಹ ಭೀಕರ ಸಮಸ್ಯೆಗಳನ್ನು ಈ ಕಾದಂಬರಿಗಳ ನೆಲೆಯಲ್ಲಿ ಅಧ್ಯಯನ ಮಾಡುವ ಉದ್ದೇಶದಿಂದ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

೬. ಅಪರಿಚಿತವಾದ ಈ ಮೂರು ಜನಾಂಗಗಳ ತುಡಿತವನ್ನು ಕಾದಂಬರಿ ಪ್ರಕಾರದ ಮೂಲಕ ಸಾಹಿತ್ಯಲೋಕಕ್ಕೆ ಪರಿಚಯಿಸಲಾಗಿದೆ. ಈ ಮೂರು ಜನಾಂಗಗಳು ಭಿನ್ನವಾಗಿದ್ದು, ಇವರೆಲ್ಲರ ಒಟ್ಟಾರೆ ಸಂವೇದನೆಗಳಲ್ಲಿ ಕಂಡುಬರುವ ಸಮಾನ ಆಶಯಗಳನ್ನು ವಿಸ್ತಾರವಾಗಿ ವಿಶ್ಲೇಷಣೆ ಮಾಡುವ ಮಹತ್ವದ ಆಶಯನ್ನು ಈ ಅಧ್ಯಯನ ಹೊಂದಿದೆ.

**ಅಧ್ಯಯನದ ಮಹತ್ವ**

೧. ಹೈದರಾಬಾದ್ ಕರ್ನಾಟಕವು ಸಾಮಾಜಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದ ಪ್ರದೇಶವಾಗಿದೆ. ಆದರೆ ಈ ಮಾತು ಸಾಹಿತ್ಯಕ ಕೊಡುಗೆಗೆ ಅನ್ವಯಿಸುವುದಿಲ್ಲ. ಯಾಕೆಂದರೆ ಕನ್ನಡ ಸಾಹಿತ್ಯಕ್ಕೆ ಈ ಭಾಗವು ತನ್ನದೇ ಆದ ಕಾಣಿಕೆಯನ್ನು ನೀಡಿದೆ. ಇಂತಹ ಪ್ರದೇಶದಲ್ಲಿ ಮೂಡಿಬಂದಿರುವ ಸಾಹಿತ್ಯ ಪ್ರಕಾರವನ್ನು ಕುರಿತು ಅಧ್ಯಯನಕ್ಕೆ ಒಳಪಡಿಸುವುದು ತುಂಬ ಮಹತ್ವಪೂರ್ಣವಾಗಿದೆ.

೨. ಹೈದರಾಬಾದ್ ಕರ್ನಾಟಕವು ಧಾರ್ಮಿಕ ಕ್ಷೇತ್ರಕ್ಕೆ ತನ್ನದೇ ಆದ ಕಾಣಿಕೆಯನ್ನು ನೀಡಿದೆ. ಆದರೆ ಇದೇ ಭಾಗದಲ್ಲಿ ಜಾತೀಯತೆ, ಅರಾಜಕತೆಯು ಹೆಚ್ಚಾಗಿ ಕಂಡುಬರುತ್ತದೆ. ಈ ವೈರುಧ್ಯವನ್ನು ಕುರಿತು ಕಾದಂಬರಿಕೇಂದ್ರಿತ ನೆಲೆಯಲ್ಲಿ ಅಧ್ಯಯನ ಕೈಗೊಳ್ಳುವುದು ಪ್ರಸ್ತುತದಲ್ಲಿ ಮಹತ್ವಪೂರ್ಣವೆಂದು ಭಾವಿಸಲಾಗಿದೆ.

೩. ಕಾದಂಬರಿಕೇಂದ್ರಿತ ನೆಲೆಯಲ್ಲಿ ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಸಾಮಾಜಿಕ ಸ್ಥಿತಿಗತಿಯನ್ನು ಅಧ್ಯಯನ ಮಾಡುವುದು ಇಂದಿಗೆ ಅತ್ಯಂತ ಮಹತ್ವದ್ದಾಗಿದೆ. ಇಂದು ಸಂವಿಧಾನಾತ್ಮಕವಾಗಿ ವಿಶೇಷ ಮೀಸಲಾತಿಯನ್ನು ಪಡೆದಿರುವ ಸಂದರ್ಭದಲ್ಲಿ ಈ ಪ್ರಾಂತ್ಯದ ಜನಜೀವನವನ್ನು ಪರಿಚಯಿಸುವುದು ಸೂಕ್ತವಾಗಿದೆ. ಆದ್ದರಿಂದ ಕಾದಂಬರಿಕೇಂದ್ರಿತ ನೆಲೆಯಲ್ಲಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## ಅಧ್ಯಯನದ ವ್ಯಾಪ್ತಿ ಮತ್ತು ವೈಧಾನಿಕತೆ

ಪ್ರಸ್ತುತ ಅಧ್ಯಯನದಲ್ಲಿ ಹೈದರಾಬಾದ್ ಕರ್ನಾಟಕ ಪ್ರಾಂತ್ಯವನ್ನು ಪ್ರತಿನಿಧಿಸುವ ಮೂರು ಕಾದಂಬರಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಮೂರು ಕಾದಂಬರಿಗಳ ವಸ್ತು ಆಯಾ ಕಾದಂಬರಿಕಾರರ ಸಮುದಾಯದ ಜೀವನಕ್ರಮವನ್ನು ಒಳಗೊಂಡಿದೆ. ಈ ಪ್ರಾಂತ್ಯವನ್ನು ಪ್ರತಿನಿಧಿಸುವ ಆಯ್ದ ಕಾದಂಬರಿಗಳಾದ ಶಾಂತರಸರ 'ಸಣ್ಣಗೌಡಸಾನಿ', ಜಂಬಣ್ಣ ಅಮರಚಿಂತರ 'ಕುರುವಯ್ಯ ಮತ್ತು ಅಂಕುಶದೊಡ್ಡಿ', ಮಲ್ಲಿಕಾರ್ಜುನ ಹಿರೆಮಠರ 'ಹವನ' ಕಾದಂಬರಿಗಳನ್ನು ಕೇಂದ್ರವಾಗಿಟ್ಟುಕೊಂಡು ಈ ಕಿರುಪ್ರಬಂಧದ ವ್ಯಾಪ್ತಿಯನ್ನು ಗುರುತಿಸಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿ ಹೈದರಾಬಾದ್ ಕರ್ನಾಟಕ ಪ್ರಾಂತ್ಯವನ್ನು ಪ್ರತಿನಿಧಿಸುವ ಕೆಲವು ಕಾದಂಬರಿಗಳನ್ನು ಪ್ರಾಸಂಗಿಕವಾಗಿ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗುವುದು. ಪ್ರಸ್ತುತ ಅಧ್ಯಯನದ ವಿಧಾನ ಯಾವುದು ಎಂದರೆ, ಸಾಧ್ಯವಾದಷ್ಟು ಕೃತಿಕೇಂದ್ರಿತವಾಗಿ ಅಧ್ಯಯನ ಮಾಡುವುದು. ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಅಂಶಗಳು ಇಲ್ಲಿ ಚರ್ಚಿತವಾದರೂ ಅವುಗಳನ್ನು ಕೃತಿಯ ಒಡಲಿನಿಂದಲೇ ಗ್ರಹಿಸುವುದಾಗಿದೆಯೇ ಹೊರತು, ಅನ್ಯಶಿಸ್ತುಗಳ ನೆರವನ್ನು ಇಲ್ಲಿ ಪಡೆಯಲಾಗಿಲ್ಲ. ಕೃತಿಯೊಳಗಿನ ಲೋಕವನ್ನು ಮಾತ್ರ ವಿಶ್ಲೇಷಣೆಗೆ ತೊಡಗಿಸಲಾಗುವುದು.

ಅಧ್ಯಾಯ ಎರಡು

# ಕಾದಂಬರಿ ಪರಂಪರೆ

## (ಹೈದರಾಬಾದ್ ಕರ್ನಾಟಕ ಕಾದಂಬರಿ ಪರಂಪರೆಯನ್ನು ಅನುಲಕ್ಷಿಸಿ)

ಹೈದರಾಬಾದ್ ಕರ್ನಾಟಕ ಪ್ರಾಂತ್ಯವು ಸಾಹಿತ್ಯಕವಾಗಿ ತನ್ನದೇ ಆದ ಚಾರಿತ್ರಿಕ ಪರಂಪರೆಯನ್ನು ಹೊಂದಿದೆ. ಆಧುನಿಕ ಕನ್ನಡ ಸಾಹಿತ್ಯಕ್ಕೆ ಈ ಪ್ರಾಂತ್ಯದ ಪ್ರತಿನಿಧೀಕರಣ ತುಂಬ ತಡವಾಗಿ ಕಂಡುಬರುತ್ತದೆ. ಆಧುನಿಕ ಕನ್ನಡ ಸಾಹಿತ್ಯ ವಿವಿಧ ಪ್ರಕಾರಗಳಾದ ಕತೆ, ಕಾವ್ಯ, ನಾಟಕ, ಕಾದಂಬರಿಗಳ ಮೂಲಕವಾಗಿ ಬೆಳೆದುಬಂದಿದೆ. ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿ ಸಾಹಿತ್ಯದ ಬೇರೆ ಪ್ರಕಾರಗಳಷ್ಟು ಕಾದಂಬರಿ ಸಾಹಿತ್ಯ ಹೆಚ್ಚು ಬೆಳೆಯಲಿಲ್ಲ. ಕತೆ, ಕಾವ್ಯಗಳು ತಡವಾಗಿ ರಚನೆಯಾದರೂ ಬೆಳವಣಿಗೆಯನ್ನು ಹೊಂದಿದವು. ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿ ಅರವತ್ತರ ದಶಕದ ಕೊನೆಯಲ್ಲಿ ಕಾದಂಬರಿಗಳು ಬೆರಳಣಿಕೆಯಷ್ಟು ಪ್ರಕಟಣೆಯಾದವು. ಇದರಿಂದ ಕನ್ನಡ ಸಾಹಿತ್ಯವು ವಿವಿಧ ಪ್ರದೇಶ ಹಾಗೂ ವಿವಿಧ ಪ್ರಕಾರಗಳಿಂದ ಉತ್ತುಂಗದ ಮಟ್ಟಕ್ಕೆ ತಲುಪಿತು. ಈ ಸಮಯಕ್ಕಾಗಲೇ ಶಿವರಾಮ ಕಾರಂತ, ಕುವೆಂಪು, ಮಾಸ್ತಿ, ರಾವ್ ಬಹದ್ದೂರ್, ಮಿರ್ಜಾ ಅಣ್ಣಾರಾಯ, ರಾಮಚಂದ್ರ ಕೊಟ್ಟಲಿಗಿ ಮುಂತಾದ ಕಾದಂಬರಿಕಾರರು ಕಾದಂಬರಿಗಳನ್ನು ಬರೆದು ಪ್ರಸಿದ್ಧಿಯನ್ನು ಪಡೆದಿದ್ದರು. ಹಾಗೆಯೇ ನವ್ಯ ಲೇಖಕರಾದ ಯಶವಂತ ಚಿತ್ತಾಲ, ಶಾಂತಿನಾಥ ದೇಸಾಯಿ, ಪಿ.ಲಂಕೇಶ್, ಯು.ಆರ್.ಅನಂತಮೂರ್ತಿ, ಶಂಕರಮೊಕಾಶಿ ಪುಣೇಕರ ಅವರಂತಹ ಎರಡನೆಯ ತಲೆಮಾರಿನ ಬರಹಗಾರರು ಕಾದಂಬರಿಗಳನ್ನು ರಚಿಸಿ ಪ್ರಸಿದ್ಧಿಯನ್ನು ಪಡೆದಿದ್ದರು. ಈ ಕಾದಂಬರಿ ಪ್ರಕಾರದ ಬೆಳವಣಿಗೆಗೆ ಮೂಲಪ್ರೇರಣೆ ಪ್ರಭಾವ ಪಾಶ್ಚಿಮಾತ್ಯರದು. ಇದರಿಂದ ಕಾದಂಬರಿ ಪ್ರಕಾರವು ಜೀವಂತಿಕೆಯನ್ನು ಪಡೆದು ಮಹತ್ವಪೂರ್ಣ ಸಾಧನೆಯನ್ನು ಅರವತ್ತರ ದಶಕದ ವೇಳೆಗಾಗಲೆ ಮಾಡಿತ್ತು. ಇದರಿಂದ ಒಂದು ಕಾದಂಬರಿ ಮಾಧ್ಯಮ ಸಿದ್ಧವಾಯಿತು. ಮೊದಲಿನ ಕಾದಂಬರಿಗಳನ್ನು ಗಮನಿಸಿದಾಗ ಇವು ಪ್ರಾದೇಶಿಕ ವೈಶಿಷ್ಟ್ಯತೆಯಿಂದ ಗಮನವನ್ನು ಸೆಳೆದಿರುವುದು ಗಮನಾರ್ಹ. ಕನ್ನಡ ನೆಲದ ಭೌಗೋಳಿಕ ವ್ಯಾಪ್ತಿಯಲ್ಲಿ ಪ್ರಾದೇಶಿಕವಾಗಿ ವಿಭಿನ್ನ ಜೀವನಕ್ರಮ, ಪ್ರಾಕೃತಿಕ ಪರಿಸರ, ಭಾಷೆ, ಸಂಪ್ರದಾಯ, ನಂಬಿಕೆ, ಆಚಾರ-ವಿಚಾರ ಮತ್ತು ಸಾಂಸ್ಕೃತಿಕ ಚಹರೆಗಳನ್ನು ಕಾದಂಬರಿ ಪ್ರಕಾರದಲ್ಲಿ ಅನಾವರಣಗೊಳಿಸಲಾಗಿದೆ.

ಮಲೆನಾಡಿನ ಬದುಕನ್ನು ಕುವೆಂಪು ಕಾದಂಬರಿಗಳು, ಕರಾವಳಿ ಕಡಲ ಪರಿಸರವನ್ನು ಕಾರಂತರ ಕಾದಂಬರಿಗಳು, ಧಾರವಾಡ ಪರಿಸರವನ್ನು ರಾಮಚಂದ್ರ ಕೊಟ್ಟಲಿಗಿಯವರ ಕಾದಂಬರಿಗಳು, ಉತ್ತರ ಕರ್ನಾಟಕ ಪರಿಸರವನ್ನು ರಾವ್ ಬಹದ್ದೂರರು, ಮಿರ್ಜಾ ಅಣ್ಣಾರಾಯ ಮತ್ತು ಶಂಕರಮೊಕಾಶಿ ಪುಣೇಕರ್ ಅವರ ಕಾದಂಬರಿಗಳು ಅನಾವರಣಗೊಳಿಸಿವೆ. ಹಾಗೆಯೇ ಹೈದರಾಬಾದ್ ಕರ್ನಾಟಕದ ಸಾಂಸ್ಕೃತಿಕ ಬದುಕನ್ನು ಇಡಿಯಾಗಿ ಬಿಂಬಿಸುವ ಕಾದಂಬರಿಗಳು ಸ್ವಾತಂತ್ರ್ಯ ಪೂರ್ವಕಾಲದಲ್ಲಿ ಸಾಮಾಜಿಕ, ರಾಜಕೀಯ ಕಾರಣಗಳಿಂದ ಹುಟ್ಟಿಕೊಳ್ಳಲಿಲ್ಲ ಎಂದು ತೋರುತ್ತದೆ. ಇದಕ್ಕೆ ಹಲವಾರು ಕಾರಣಗಳಿವೆ. ಹೈದರಾಬಾದ್‌ಕರ್ನಾಟಕ ಪ್ರಾಂತ್ಯವು ಪ್ರಾದೇಶಿಕವಾಗಿ ಅತ್ಯಂತ ಹಿಂದುಳಿದ ಭಾಗವಾಗಿದೆ. ಇಲ್ಲಿನ ಬಡತನ, ಅನಕ್ಷರತೆ, ಜಮೀನ್ದಾರಿ ವ್ಯವಸ್ಥೆಯಿಂದಾಗಿ ಸಾಮಾನ್ಯ ಜನತೆಯು ಶಿಕ್ಷಣದಿಂದ ವಂಚಿತರಾಗಿದ್ದರು. ಇದರಿಂದ ಇಲ್ಲಿ ಸಾಹಿತ್ಯ ರಚನೆ ಸಾಧ್ಯವಾಗದಿರಬಹುದು.

ಹೈದರಾಬಾದ್ ಕರ್ನಾಟಕ ಪರಿಸರದಲ್ಲಿ ಹುಟ್ಟಿಕೊಂಡ ಕಾದಂಬರಿಗಳು ಬೆಳ್ಳಿ, ಯಾತನಾಶಿಬಿರ, ಹಾಲುಜೇನು, ಸುಳಿಗಾಳಿ, ಗೋಹರಜಾನ್ ಮಾಲತಿ ಮತ್ತು ನಾನು, ಸಣ್ಣಗೌಡಸಾನಿ, ಕುರುಮಯ್ಯ ಮತ್ತು ಅಂಕುಶದೊಡ್ಡಿ ಹವನ ಮುಂತಾದವುಗಳು. ಗೀತಾ ನಾಗಭೂಷಣರ ಕಾದಂಬರಿಗಳು ಸ್ವಾತಂತ್ರಪೂರ್ವದ ಈ ಪ್ರದೇಶದ ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ತಲ್ಲಣಗಳನ್ನು ಬಿಂಬಿಸಲು ಪ್ರಯತ್ನಿಸಿವೆ. ಹಾಗೆಯೇ ಆ ಸಂದರ್ಭದ ವಾಸ್ತವ ಸ್ಥಿತಿ ಮತ್ತು ವಸ್ತುಸ್ಥಿತಿಯ ಚಿತ್ರಣಗಳು ಈ ಕಾದಂಬರಿಗಳಲ್ಲಿ ಮರುಸೃಷ್ಟಿಯನ್ನು ಪಡೆದುಕೊಂಡಿವೆ. ಈ ಭಾಗದಲ್ಲಿ ರಚನೆಯಾದ ಕಾದಂಬರಿಗಳು ಇಲ್ಲಿನ ಗ್ರಾಮೀಣ ಬದುಕಿನ ಸಾಂಸ್ಕೃತಿಕ ಏಳುಬೀಳುಗಳನ್ನು ಚಿತ್ರಿಸುವ ರಚನೆಯಾಗಿವೆಯೇ ಹೊರತು, ನಗರ ಬದುಕಿನ ವಿವರಗಳನ್ನು ಕಾಣಿಸುವ 'ಆಧುನಿಕ' ಬದುಕಿನ ಚಹರೆಗಳನ್ನು ಮತ್ತು ತವಕ-ತಲ್ಲಣಗಳನ್ನು ಕಟ್ಟಿಕೊಡುವಂತಹ ಕಾದಂಬರಿಗಳು ರಚನೆಯಾಗಲಿಲ್ಲ. ಈ ಮಾತು 'ಸಣ್ಣಕಥೆ' ಪ್ರಕಾರದಲ್ಲೂ ನಿಜವಾಗಿದೆ. ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಪ್ರಾದೇಶಿಕ ವೈಶಿಷ್ಟ್ಯತೆಯನ್ನು ಪ್ರಮುಖವಾಗಿ ದಾಖಲಿಸುವಂತಹ ಈ ಪ್ರದೇಶದ ಸಾಹಿತಿಗಳು ತಡವಾಗಿ ಪ್ರೇರಣೆ ಪಡೆದುಕೊಂಡಿರುವುದರಿಂದಲೂ, ಸ್ವಾತಂತ್ರ್ಯಪೂರ್ವದ ಸಮಯದಲ್ಲಿ ಬರೆಯುವ ಒತ್ತಡವನ್ನು ಸೃಷ್ಟಿಸಿಕೊಳ್ಳದೆ ಇರುವುದರಿಂದಲೂ ಅರವತ್ತರ ದಶಕದ ನಂತರ ಬರೆಯಲು ತೊಡಗಿದ ಈ ಲೇಖಕರಿಗೆ ತಮ್ಮ ಪ್ರಾದೇಶಿಕತೆಯ ವೈಶಿಷ್ಟ್ಯತೆಯನ್ನು ಕಟ್ಟಿಕೊಳ್ಳುವುದರ ಬಗ್ಗೆ ಒಲವು ಬಂದಿರಬೇಕು. ಹಾಗೆಯೇ ಈ ಪ್ರಾಂತ್ಯದ ಬರಹಗಾರರು ಬಂಡಾಯ ಸಾಹಿತ್ಯದಿಂದ ಹೆಚ್ಚು ಪ್ರೇರಿತರಾದವರು. ಬಂಡಾಯವು ತಳಸಮುದಾಯಗಳಲ್ಲಿ ಜಾಗೃತಿಯ ಪ್ರಜ್ಞೆಯನ್ನು ಮೂಡಿಸುವ ಪ್ರಮುಖ ಆಶಯ ಹೊತ್ತಿರುವುದರಿಂದ ಇವರು ಗ್ರಾಮೀಣ ಬದುಕಿನ ತಲ್ಲಣಗಳನ್ನು ತಮ್ಮ ಸಾಹಿತ್ಯದ ವಸ್ತುವಾಗಿ ಸ್ವೀಕರಿಸಿರುವುದು ಕಂಡುಬರುತ್ತದೆ. ಆಧುನಿಕ ಬದುಕಿನ ಆತಂಕಗಳು

ಮತ್ತು ಅಸಂಗತ ಮನಸ್ಸಿನ ತುಮುಲಗಳು, ಅನಾಥ ಪ್ರಜ್ಞೆ ಮುಂತಾದ ಸಮಸ್ಯೆಗಳು ಇಲ್ಲಿ ಕಂಡುಬಂದರೂ ಇದಕ್ಕಿಂತ ಮುಖ್ಯವಾಗಿ ಅಸಮಾನತೆಯನ್ನು ತೊಡಗಿಸುವುದು ಇಲ್ಲಿನ ಬರಹಗಾರರ ಪ್ರಮುಖ ಆಶಯವಾಗಿತ್ತು.

ಸ್ವಾತಂತ್ರ್ಯಪೂರ್ವ ಕಾದಂಬರಿಗಳ ಪ್ರಮುಖ ಆಶಯವಾದ ಪ್ರಾದೇಶಿಕ ಚಹರೆಯನ್ನು ಕಟ್ಟಿಕೊಡುವಂತಹ ಧೋರಣೆಯು ಅರವತ್ತರ ದಶಕದ ಹೊತ್ತಿಗೆ ಮುಗಿದುಹೋಗಿ, ನವ್ಯ ಸಾಹಿತ್ಯದ ಚಳುವಳಿ ಪ್ರೇರಣೆಯಿಂದ ಹುಟ್ಟಿಕೊಂಡ ಅಬ್ಬರವು ಈ ಹೊತ್ತಿನಲ್ಲಿ ಇಲ್ಲಿನ ಲೇಖಕರಿಗೆ ಮುಗಿದು ಹೋದಂತೆ ಕಾಣಿಸಿದೆ. ಹೀಗಾಗಿ ಪ್ರಾದೇಶಿಕ ವೈಶಿಷ್ಟ್ಯತೆಯನ್ನು ಹೊತ್ತ ಕಾದಂಬರಿಗಳ ಅವಶ್ಯಕತೆಯನ್ನು ಮನಗಂಡು ಇವರು ತಮ್ಮ ಬರವಣಿಗೆಯನ್ನು ಆರಂಭಿಸಿರುವುದಾಗಿ ತಿಳಿದುಬರುತ್ತದೆ.

ನವ್ಯ ಕಾದಂಬರಿ ಪ್ರಕಾರದಲ್ಲಿ ಬರೆಯಲು ಈ ಪರಿಸರದ ಲೇಖಕರಿಗೆ ಆ ಪ್ರಜ್ಞೆಯ ಅನುಭವದ ಕೊರತೆ ಮತ್ತು ಅಂತಹ ಇಕ್ಕಟ್ಟಿನ ಪರಿಸ್ಥಿತಿಯು ಎದುರಾದಂತೆ ಕಂಡುಬರುತ್ತದೆ. ಇವರಲ್ಲಿ ಶಾಂತರಸ ಮತ್ತು ಜಂಬಣ್ಣ ಅಮರಚಿಂತರು ಪ್ರಮುಖರಾಗಿದ್ದಾರೆ. ಅರವತ್ತರ ದಶಕದ ಕಾಲಘಟ್ಟದಲ್ಲಿ ಸ್ಥಳೀಯ ಬದುಕಿನ ವಿವರಗಳನ್ನು ಪ್ರತಿಫಲಿಸುವ ಸಣ್ಣಗೌಡಸಾನಿ ದೊಡ್ಡ ಕಾದಂಬರಿಯಾಗಿ ಬರೆದರೂ ಅದನ್ನು ಪ್ರಕಟಿಸುವಲ್ಲಿ ಹಿಂಜರಿಕೆ ಮತ್ತು ಪ್ರಕಾಶಕರ ಕೊರತೆ ಇವರಿಗೆ ಎದುರಾಗಿರುವುದು ತಿಳಿದುಬರುತ್ತದೆ. ಇಂತಹ ಪರಿಸ್ಥಿತಿಯನ್ನು ಇನ್ನೊಬ್ಬ ಬರಹಗಾರರಾದ ಜಂಬಣ್ಣ ಅಮರಚಿಂತರ ಕಾದಂಬರಿಯಾದ ಕುರಮಯ್ಯ ಮತ್ತು ಅಂಕುಶದೊಡ್ಡಿಯು ಬುಡಕಟ್ಟು ಸಮುದಾಯಕ್ಕೆ ಸೇರಿದ ಕೊರವ ಸಮುದಾಯದ ಜೀವನಶೈಲಿ ಮತ್ತು ಅವರು ಎದುರಿಸುವ ಸಮಸ್ಯೆ ಮತ್ತು ಸವಾಲುಗಳನ್ನು ಕುರಿತು ರಚಿಸಿದ ಬೃಹತ್ ಕಾದಂಬರಿಯಾಗಿದೆ. ಈ ಕೃತಿಗಳು ರಚನೆಯಾದ ಸಮಯದಲ್ಲಿ ಪ್ರಕಟವಾಗಿದ್ದರೆ ಮಹತ್ವದ ಕೃತಿಗಳ ಸಾಲಿನಲ್ಲಿ ಚರ್ಚೆಯಾಗುತ್ತಿದ್ದವು. ಅಷ್ಟೇ ಅಲ್ಲದೆ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ತನ್ನದೇ ಆದ ಮಹತ್ವವನ್ನು ಪಡೆಯುತ್ತಿದ್ದವು. ಆದರೆ ಪ್ರಕಟಣೆಯಾಗದೆ ಹದಿನೈದು ಇಪ್ಪತ್ತು ವರ್ಷಗಳ ನಂತರ ಪ್ರಕಟಗೊಂಡಿದ್ದರಿಂದ ಮೂಲ ಗಾತ್ರವನ್ನು ಕಳೆದುಕೊಂಡು ಚಿಕ್ಕರೂಪದಲ್ಲಿ ಸ್ಥಳೀಯ ಪ್ರಕಾಶನದಲ್ಲಿ ಪ್ರಕಟಗೊಂಡವು. ೧೯೯೮ರಲ್ಲಿ 'ಸಣ್ಣಗೌಡಸಾನಿ' ಹಾಗೂ ೧೯೯೪ರಲ್ಲಿ 'ಕುರುಮಯ್ಯ ಮತ್ತು ಅಂಕುಶುದೊಡ್ಡಿ' ಪ್ರಕಟಗೊಂಡವು. ಇದು ಈ ಪ್ರದೇಶದ ಸಾಹಿತ್ಯ ಪರಿಸರಕ್ಕೆ ಸಂಭವಿಸಿದ ವಿಷಾದನೀಯ ಸಂಗತಿಯಾಗಿದೆ. ಇಂತಹ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಬೆರಳೆಣಿಕೆಯಷ್ಟು ಕೃತಿಗಳು ರಚನೆಯಾದವು. ದೇವೇಂದ್ರ ಕುಮಾರ ಹಕಾರಿ ಅವರ 'ಕೂಗುತಿದೆ ಕಲ್ಲು' (೧೯೯೧), ಜಯತೀರ್ಥ ರಾಜಪುರೋಹಿತರ 'ಹಾಲುಜೇನು' (೧೯೬೭), ಚಂದ್ರಕಾಂತ ಕುಸನೂರರ 'ಚರ್ಚ್‌ಗೇಟ್' (೧೯೭೫), ಗವೀಶ ಹೀರೇಮಠರ 'ಬದುಕು ಚದುರಂಗದಾಟ' (೧೯೭೬) ಇವು ಪ್ರಮುಖ ಕಾದಂಬರಿಗಳಾಗಿ ಕಾಣಿಸಿಕೊಂಡವು. ಈ ಕಾದಂಬರಿಗಳಿಗೆ ಪ್ರಭಾವ–ಪ್ರೇರಣೆ ಎಲ್ಲಿಂದ ಆಯಿತು ಎಂದು ಗುರುತಿಸುವಂತಹದು ಕಷ್ಟಕರವಾಗಿದೆ.

ಹೈದರಾಬಾದ್ ಕರ್ನಾಟಕದಲ್ಲಿ ಸ್ವಾತಂತ್ರ್ಯೋತ್ತರ ಆರಂಭದ ಕಾಲದಲ್ಲಿ ಕಾದಂಬರಿಗಳು ಹುಟ್ಟಿಕೊಳ್ಳಲು ಪ್ರಾರಂಭವಾದವು. ಅವು ಆರಂಭದಲ್ಲಿ ಚರಿತ್ರೆಗೆ ಸಂಬಂಧಪಟ್ಟ ಕಾದಂಬರಿಗಳಾಗಿದ್ದವು. ಈ ಪ್ರದೇಶದಲ್ಲಿ ಪ್ರಭಾವವಿರುವ ಶರಣರ ಚರಿತ್ರೆಗಳ ರಚನೆ ಹಾಗೂ ಅವರು ಮಾಡಿದ ಸಾಧನೆ, ಪವಾಡ, ಅನುಭವದ ನುಡಿಗಳನ್ನು ಮತ್ತು ಭಕ್ತಿ, ಭಾವುಕತೆಗಳನ್ನು ಕತೆಯ ವಸ್ತುವಾಗಿಸಿಕೊಂಡವು. ಮುದಗಲ್ಲ ಕುಂತಲೇಶ್ವರ, ಕೂಗುತಿದೆ ಕಲ್ಲು, ಚಲ್ವಕೋಗಿಲೆ, ತ್ರಿಭುವನಮಲ್ಲ ಎನ್ನುವಂತಹ ಐತಿಹಾಸಿಕ ಕಾದಂಬರಿಗಳು ರಚನೆಯಾದವು. ಅವುಗಳಲ್ಲಿ 'ಕೂಗುತಿದೆ ಕಲ್ಲು' ಕಾದಂಬರಿಯಲ್ಲಿ ವಾಸ್ತುಶಿಲ್ಪ, ಶಿಲ್ಪಕಲೆ, ಗುಹೆಗಳನ್ನು ಪರಿಚಯಿಸುವ ಕಲೆಯನ್ನು ಚಿತ್ರಿಸಿದವು.

ಹಾಗೆಯೇ ಇಪ್ಪತ್ತನೆಯ ಶತಮಾನದಲ್ಲಿ ಈ ಪರಿಸರದಲ್ಲಿ ಬರೆಯಬಲ್ಲ ಪ್ರತಿಭೆಯನ್ನು ಹೊಂದಿದ್ದ ಸಿದ್ಧಯ್ಯ ಪುರಾಣಿಕರು 'ತ್ರಿಭುವನಮಲ್ಲ' ಎಂಬ ಐತಿಹಾಸಿಕ ಕಾದಂಬರಿ ಮತ್ತು ವಚನಗಳನ್ನು ಮಾತ್ರ ಬರೆದರು. ಇದರಿಂದ ಆಧುನಿಕ ಕವಿಗಳಾದ ಕುವೆಂಪು, ಕಾರಂತರು, ರಾವ್ ಬಹದ್ದೂರ್ ಅಂತಹವರಿಗೆ ಸರೀಕರಾಗಿ ನಿಲ್ಲಲು ಸಾಧ್ಯವಾಗಲಿಲ್ಲ. ಏಕೆಂದರೆ ಆ ಕವಿಗಳಂತೆ ಇವರ ಕೃತಿಗಳಲ್ಲಿ ವಾಸ್ತವ ಪರಿಸ್ಥಿತಿಯ ವಸ್ತು ಇರಲಿಲ್ಲವೆಂದು ತೋರುತ್ತದೆ. ತದನಂತರ ಚಂದ್ರಕಾಂತ ಕುಸನೂರರು ನವ್ಯ ಸಾಹಿತ್ಯದ ಸಮಯದ ಅಸಂಗತ ನಾಟಕ, ನವ್ಯ ಕಾವ್ಯವನ್ನು ಬರೆದು ತಮ್ಮನ್ನು ಗುರುತಿಸಿಕೊಂಡರು. ಪ್ರಸ್ತುತತೆಯನ್ನು ಇಟ್ಟುಕೊಂಡು ಕಾದಂಬರಿಯನ್ನು ಬರೆದವರು ಇವರೊಬ್ಬರೆ ಎಂದು ತಿಳಿದುಬರುತ್ತದೆ. ಆ ಸಮಯದಲ್ಲಿ ಈ ಪ್ರದೇಶದಲ್ಲಿನ ರಾಜಕೀಯ ಬದಲಾವಣೆಗಳಿಂದ ಸಂಭವಿಸಿದ ಸಾಮಾಜಿಕ ಬಿಕ್ಕಟ್ಟುಗಳನ್ನು ಚಿತ್ರಿಸುವಂತಹ ಒಂದು ಸಣ್ಣ ಹಳ್ಳಿಯ ಬಗ್ಗೆ ಮತ್ತು ಸಂತ್ರಸ್ತರ ಬವಣೆ–ನೋವುಗಳು ಹಾಗೂ ಮೇಲುವರ್ಗದವರ ಸುಖಕರ ದಿನಗಳನ್ನು ಬಿಂಬಿಸುತ್ತವೆ. ಹಾಗೆಯೇ ಗೋಹಾರಜಾನ್ ಮಾಲತಿ ಮತ್ತು ನಾನು ಎಂಬಂತಹ ಕೃತಿಯಲ್ಲಿ ಗುಲ್ಬರ್ಗ ಹಾಗೂ ಅದರ ಸುತ್ತಮುತ್ತಲಿನ ಹತ್ತಾರು ಹಳ್ಳಿಗಳ ಚಿತ್ರಣವನ್ನು ಕಟ್ಟಿಕೊಡುತ್ತಾರೆ. ಹಾಲುಜೇನು ಮತ್ತು ಸುಳಿಗಾಳಿ ಕಾದಂಬರಿಗಳಲ್ಲಿ ಹೈದರಾಬಾದ್ ಕರ್ನಾಟಕ ಪರಿಸರದ ಗ್ರಾಮ ಮತ್ತು ನಗರ ಪರಿಸರಗಳಲ್ಲಿ ಸ್ವಾತಂತ್ರ್ಯಪೂರ್ವದಲ್ಲಿ ನಡೆಸಿದಂತಹ ರಜಾಕಾರರ ದಾಳಿಯ ಚಿತ್ರಣಗಳನ್ನು ಈ ಕಾದಂಬರಿಗಳು ಅನಾವರಣಗೊಳಿಸುತ್ತವೆ.

ಚೆನ್ನಣ್ಣ ವಾಲೀಕಾರರ 'ಬೆಳ್ಳಿ' ಕಾದಂಬರಿಯು ೧೯೭೩ರಲ್ಲಿ ರಚನೆಗೊಂಡಿತು. ಇದು ಆಡುಮಾತಿನಲ್ಲಿ ರಚನೆಯಾದಂತಹ ಕೃತಿಯಾಗಿದೆ. ತಾಯ್ನುಡಿಯಾದ ತನ್ನ ನೆಲದ ಆಡುನುಡಿಯನ್ನೇ ಇಡಿಯಾಗಿ ಬಳಸಿಕೊಂಡು ರಚನೆಯಾದ ಈ ಭಾಗದ ಮೊದಲ ಕೃತಿಯೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಚೆನ್ನಣ್ಣ ವಾಲೀಕಾರರು ಕನ್ನಡ ಪ್ರಾಧ್ಯಾಪಕರಾಗಿ ಜೈನ ಕಾವ್ಯಗಳನ್ನು ಓದಿ, ಅದರ ಭಾಷೆ, ಶೈಲಿ ಪ್ರಭಾವಕ್ಕೆ ಒಳಗಾಗಿ, ಅಲ್ಲಿನ ಚಂಪೂ ಸಾಹಿತ್ಯದಂತೆ ಆಧುನಿಕ ಕಾಲದ ನೆಲದ ಆಡುನುಡಿಯನ್ನು ಚಂಪೂ ಸಾಹಿತ್ಯದ ಗದ್ಯರೂಪದಂತೆ ಬರೆದರು. ಈ ಪರಿಸರದಲ್ಲಿ ತ್ರಿಭಾಷೀಕರಣದ

ಪ್ರಭಾವ ಇರುವುದರಿಂದ ಭಾಷಿಕ ಸಂವಹನಗಳ ತೊಡಕು ಉಂಟಾದವು. ಹೀಗೆ ಈ ಸಮಸ್ಯೆಗಳಿಂದ ಸಾಮಾನ್ಯರು ಓದಲು ಕಷ್ಟವಾಯಿತು. ಬೇರೆ ಪ್ರಾಂತದ ಕವಿಗಳು ಇದನ್ನು ತಿರುಗಿ ಸಹ ನೋಡುವ ಸಾಹಸ ಮಾಡಲಿಲ್ಲ. ಇದರಂತೆಯೇ ದೇವನೂರು ಮಹಾದೇವ ಅವರು ಬರೆದ 'ಕುಸುಮಬಾಲೆ' ಕೃತಿಯು ಆಡುನುಡಿಯಲ್ಲಿಯೇ ರಚನೆಯಾಗಿದೆ. ಇದನ್ನು ಗ್ರಹಿಸಿದ ಜನ ಆ ಕೃತಿಯನ್ನು ಗ್ರಹಿಸಲು ಸಾಧ್ಯವಾಗಲಿಲ್ಲ ಎಂಬುದು ಒಂದು ದುರಂತದ ಸಂಗತಿಯಾಗಿದೆ. ನಂತರ ಇವರು ಕೆಲವು ಕೃತಿಗಳ ರಚನೆಗೆ ತೊಡಗಿದರು. ಅವು 'ಗ್ರಾಮಭಾರತ', 'ಹುಲಿಗೆಮ್ಮ', 'ಕೋಟೆಬಾಗಿಲು', ಹೆಣ್ಣಿನ ಬಾಳಾಗಿತ್ತು ಕೃತಿಗಳಾಗಿವೆ. ಇವರಿಗೆ ಕೃತಿ ಬರೆಯುವಂತಹ ಅನುಭವವಿದೆ. ಆದರೆ ಕೃತಿಯನ್ನು ಬರೆಯುವಾಗ ಸಂಭಾಷಣೆ, ಆಡುನುಡಿಯ ಬರವಣಿಗೆ ಬಳಸದೆ ಗ್ರಂಥಸ್ಥ ಭಾಷೆಯನ್ನು ಬಳಸಿದರು. ಇದು ಇವರ ಬರವಣಿಗೆ ಸಫಲವಾಗದಿರುವದಕ್ಕೆ ಕಾರಣವಾಗಿರಬಹುದು. ಇವರ ಕೃತಿಗಳಲ್ಲಿ ಇಡೀ ಬದುಕನ್ನು ಗ್ರಹಿಸದೆ ಹಳ್ಳಿಯ ಬದುಕಿನ ಚಿತ್ರಣವನ್ನು ಮತ್ತು ಅವುಗಳ ಚಲನೆಯ ಮೂಲಾಂಶಗಳನ್ನು ವಿವರಿಸದೆ ಕೇವಲ ಮೇಲು-ಕೀಲು, ಕಪ್ಪು-ಬಿಳುಪು ಎಂಬ ವರ್ಗಗಳ ಕಲ್ಪನೆಯನ್ನು ಮಾತ್ರ ಗ್ರಹಿಸಿದಂತೆ ಕಾಣುತ್ತದೆ. ಇವರು ಒಟ್ಟು ಕನ್ನಡ ಸಾಹಿತ್ಯದ ಕಲ್ಪನೆಯನ್ನು ಗ್ರಹಿಸಲಿಲ್ಲ. ಈ ಮಾತು ಶಾಂತರಸ, ಚಂದ್ರಕಾಂತ ಕುಸನೂರ, ಗೀತಾ ನಾಗಭೂಷಣ ಅವರಿಗೂ ಅನ್ವಯಿಸುತ್ತದೆ.

**ಚೆನ್ನಣ್ಣ ವಾಲೀಕಾರರ 'ಹುಲಿಗೆಮ್ಮ'** ಕಾದಂಬರಿಯು ಕೆಳವರ್ಗದ ಕುಟುಂಬದಲ್ಲಿ ಹುಟ್ಟಿದ ಹುಲಿಗೆಮ್ಮನ ಕಥೆಯಾಗಿದೆ. ಇವಳನ್ನು ಊರಗೌಡನ ಮಗ ಸಿದ್ಧಪ್ಪ ಬಲವಂತದಿಂದ ವಶಪಡಿಸಿಕೊಂಡು ಭೋಗಿಸುತ್ತಾನೆ. ಇದರಿಂದ ಹುಲಿಗೆಮ್ಮ ಗರ್ಭಿಣಿಯಾಗುತ್ತಾಳೆ, ಪಂಚಾಯ್ತಿ ನಡೆಯುತ್ತದೆ. ಪಂಚಾಯ್ತಿಯಲ್ಲಿ ಯಾರಿಗೆ ನ್ಯಾಯ ಸಿಗುತ್ತದೆ ಎಂದು ಬೇರೆ ಹೇಳಬೇಕಾಗಿಲ್ಲ. ತಪ್ಪು ಸಿದ್‌ಧಪ್ಪ ಮಾಡಿದರೂ ನ್ಯಾಯ ಮೇಲುವರ್ಗದ ಪರವಾಗಿ ಆಗುತ್ತದೆ. ಹೊಟ್ಟೆ ತೆಗಿಸಿ ಹುಲಿಗೆಮ್ಮನಿಗೆ ಬೇರೆ ಮದುವೆ ಮಾಡಿಕೊಡಬೇಕೆಂದು ಈ ವ್ಯವಸ್ಥೆ ಹಣವನ್ನು ಕೊಡುತ್ತದೆ. ಈ ಹೆಣ್ಣಿಗೆ ಇಲ್ಲಿಂದ ಸಂಕಷ್ಟ ಶುರುವಾಗುತ್ತದೆ. ಬೇರೊಂದು ಊರಿಗೆ ವಿವಾಹ ಮಾಡಿಕೊಡುತ್ತಾರೆ. ಹೊಟ್ಟೆ ತೆಗಿಸಿ ಮದುವೆ ಮಾಡಿಕೊಂಡು ಸೋಬಾನದ ರಾತ್ರಿ ಗಂಡ ಭೀಮಣ್ಣನ ಬದಲು ಮೈದುನ ರಾಮಣ್ಣ ಹಾಸಿಗೆಗೆ ಬಂದು ಕುಳಿತಿದ್ದ. ಅವನ ಮನೆಯ ಮಂದಿಯೇ ಈ ವ್ಯವಸ್ಥೆ ಮಾಡಿದ್ದರಿಂದ ಅನಿವಾರ್ಯವಾಗಿ ಮೈದುನನ ಜತೆ ಸಂಸಾರ ಹೂಡಿದರೂ ಯಾಕೋ ಜಿಗುಪ್ಸೆ ಬಂದು ಓಡಿದಳು. ಗಂಡನೇ ತನ್ನ ಒಡೆಯ ಶಾಮರಾಯನಿಗೆ ಹೇಳಿ ಹುಲಿಗೆಮ್ಮನನ್ನು ಹಿಡಿಸಿದನು. ಹುಲಿಗೆಮ್ಮ ಶಾಮರಾಯರ ಪಾಲಾದಳು. ಇದನ್ನು ಕಂಡ ಊರಿನ ಶೇಷಪ್ಪ ಕುಲಕರ್ಣಿ, ಧರೆಯಪ್ಪ ಕೂಡಿ ಶಾಮರಾಯನನ್ನು ಕೊಲೆ ಮಾಡಿಸಿದರು. ಈ ಕೊಲೆಯಲ್ಲಿ ಕೆಲವರು ಜೀತದಾಳುಗಳು ಜತೆ ಧರೆಪ್ಪಗೌಡ ಜೈಲಿಗೆ ಹೋದರು. ಹುಲಿಗೆಮ್ಮ ಶೇಷಪ್ಪ ಕುಲಕರ್ಣಿಯ

ವಶವಾದಳು. ಜೈಲಿನಿಂದ ಬಂದ ಧರೆಪ್ಪಗೌಡ ಕುಲಕರ್ಣಿಯನ್ನು ಕೊಲ್ಲಿಸಿ ಹುಲಿಗೆಮ್ಮನನ್ನು ಹಿಡಿದುಕೊಂಡನು. ಶ್ರೀಮಂತರ ಜಗಳ, ಕೊಲೆ, ನೋಡಿದ ಹುಲಿಗೆಮ್ಮ ತನ್ನನ್ನು ಕಾವಲಿರಿಸಿದ ಕಾಳ್ಯನನ್ನು ಒಲಿಸಿಕೊಂಡು ವಾಡಿಯಲ್ಲಿ ನೆಲೆಸಿದಳು. ಇದನ್ನು ತಿಳಿದ ಧರೆಪ್ಪಗೌಡ ಕಾಳ್ಯನನ್ನು ಕೊಲ್ಲಿಸಿದನು. ಒಂಟಿಯಾದ ಹುಲಿಗೆಮ್ಮ ಆರು ಜನರ ಭೋಗದ ವಸ್ತುವಾಗಿ ನಂತರ ಕಾಳ್ಯಾನನ್ನು ಕಳೆದುಕೊಂಡ ಮೇಲೆ ಅನಿವಾರ್ಯವಾಗಿ ಸೂಳೆಯಾಗಿ ಬದುಕಬೇಕಾಗುತ್ತದೆ. ಇದು ಮೇಲುನೋಟಕ್ಕೆ ಮಹಿಳೆಯನ್ನು ಕುರಿತಿದ್ದು ಎಂದು ಕಾಣಿಸಿದರೂ ಇಲ್ಲಿ ಸೇಡು, ಕೊಲೆ, ಶಿಕ್ಷೆ ಕಾಣಿಸುತ್ತದೆ. ಒಬ್ಬರ ಕೈಯಿಂದ ಒಬ್ಬರ ಕೈಗೆ ಸೇರುವ ಹುಲಿಗೆಮ್ಮ ಭೋಗದ ವಸ್ತುವಂತೆ ಕಾಣಿಸುತ್ತಾಳೆ.

**ಚೆನ್ನಣ್ಣ ವಾಲೀಕಾರರ 'ಒಂದು ಹೆಣ್ಣಿನ ಒಳಜಗತ್ತು'** ಕಾದಂಬರಿಯಲ್ಲಿ ರತ್ನಮ್ಮ ಚಿಕ್ಕವಯಸ್ಸಿನಲ್ಲಿ ಗಂಡನನ್ನು ಕಳೆದುಕೊಂಡವಳು. ಮದುವೆಯಾದ ಹೊಸದರಲ್ಲಿ ಅವಳ ಗಂಡ ಭೀಮನಗೌಡ ಮತ್ತು ಅಣ್ಣ ರಾಮನಗೌಡನ ನಡುವೆ ಆಸ್ತಿಯು ಪಾಲಾಗುವ ಹೊತ್ತಿನಲ್ಲಿ ಜಗಳವಾಗಿ ರಾಮನಗೌಡ ತಮ್ಮನನ್ನು ಕಲ್ಲಿಂದ ಹೊಡೆದು ಕೊಂದು ಜೈಲಿಗೆ ಹೋಗುತ್ತಾನೆ. ವಿಧವೆಯಾದ ರತ್ನಮ್ಮ ತವರು ಮನೆಗೆ ಬಂದು ಅಣ್ಣ ಸಂಗಣ್ಣಗೌಡನ ಆಶ್ರಯಕ್ಕೆ ಬಂದರೂ ಅತ್ತಿಗೆ ಜತೆ ಜಗಳವಾಡಿ ಬೇರೆ ಇರತೊಡಗಿದಳು. ರತ್ನಮ್ಮನ ಅಣ್ಣ ತನ್ನ ತಂಗಿಗೆ ಇರಲು ವ್ಯವಸ್ಥೆ ಮಾಡಿದ. ವಯಸ್ಸು ಚಿಕ್ಕದು, ಗಂಡ ಸತ್ತಿದ್ದ. ಅಣ್ಣನ ಮನೆಯ ಜೀತದಾಳು ಮಲ್ಯಾನನ್ನು ಗುಪ್ತವಾಗಿ ಒಲಿಸಿಕೊಂಡಳು. ಸ್ವಲ್ಪ ದಿನಗಳಲ್ಲಿ ಅಣ್ಣನ ಕೈಗೆ ಸಿಕ್ಕಳು. ಮಲ್ಯಾನನ್ನು ಸಂಗಣ್ಣ ಉಪಾಯವಾಗಿ ಕರೆದುಕೊಂಡು ಹೋಗಿ ಹೊಳೆಗೆ ಎಸೆದು ಬಂದ. ಮದುವೆಯಾಗಿರದ ಮಲ್ಯಾ ಸತ್ತ ಮೇಲೆ ಅವನ ತಾಯಿ ಒಂಟಿಯಾದಳು. ಇದರ ಆಶಯ ಇಲ್ಲಿ ಮಲ್ಯಾನ ತಪ್ಪಿರದಿದ್ದರೂ ಅವನಿಗೆ ಶಿಕ್ಷೆಯಾಯಿತು. ಆದರೆ ರತ್ನಮ್ಮನಿಗೆ ಆಕೆಯ ಅಣ್ಣ ಸಂಗನಗೌಡ ಏನೂ ಮಾಡಲಿಲ್ಲ.

ಇವರ ಕಾದಂಬರಿಗಳಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶದ ಹಳ್ಳಿಗಳಲ್ಲಿರುವ ಸಾಮಾಜಿಕ, ರಾಜಕೀಯ ವ್ಯವಸ್ಥೆಯ ವಾಸ್ತವಿಕ ಚಿತ್ರಣ ಕಂಡುಬರುತ್ತದೆ. ಉಳ್ಳವರ ದರ್ಪ, ಜನಸಾಮಾನ್ಯರ ಸಂಕಷ್ಟ ಮತ್ತು ಶೋಷಣೆ ಇಲ್ಲಿದೆ. ಜಮೀನ್ದಾರರು ತಮ್ಮ ಹಣ, ಪ್ರತಿಷ್ಠೆ, ಗೌರವಗಳನ್ನು ಪ್ರದರ್ಶಿಸುವ ಗುಣವನ್ನು ಹೊಂದಿರುತ್ತಾರೆ. ಬಡವರು, ಸಾಮಾನ್ಯರು ತಮ್ಮ ಪಾಡಿಗೆ ತಾವು ಬದುಕು ರೂಪಿಸಿಕೊಂಡು ಸ್ವತಂತ್ರವಾಗಿ ಬದುಕಲು ಸಾಧ್ಯವಿಲ್ಲ. ಸಾಹುಕಾರ, ನಾಯಕರ, ಜಮೀನ್ದಾರರ ಆಶ್ರಯ ಪಡೆದು ಇವರು ಬದುಕಬೇಕು. ಇದರಿಂದ ತಳಸಮುದಾಯವು ಶೋಷಣೆಗೆ ಒಳಗಾಗುತ್ತದೆ ಮತ್ತು ಕೆಳವರ್ಗದ ಹೆಣ್ಣನ್ನು ಸಹ ಶೋಷಣೆ ಒಳಪಡಿಸುವಂತದ್ದು ಇವರ ಕೃತಿಗಳಲ್ಲಿ ಕಂಡುಬರುತ್ತದೆ.

ಗೀತಾ ನಾಗಭೂಷಣ ಅವರು ಹೈದರಾಬಾದ್ ಕರ್ನಾಟಕ ಪ್ರಾಂತ್ಯಕ್ಕೆ ಸಂಬಂಧಿಸಿದ ಬರಹಗಾರರಲ್ಲಿ ಹೆಚ್ಚು ಪ್ರಸಿದ್ಧಿಯನ್ನು ಪಡೆದಿದ್ದಾರೆ. ಕಥೆ ಮತ್ತು ಕಾದಂಬರಿ ಕ್ಷೇತ್ರದಲ್ಲಿ ಸಾಕಷ್ಟು ಪ್ರಸಿದ್ಧಿಯನ್ನು ಪಡೆದು ಜನಪ್ರಿಯರಾಗಿದ್ದಾರೆ. ಇವರು ಕನ್ನಡ ಸಾಹಿತ್ಯದಲ್ಲಿ ಕಾಣಿಸುವ ಅನೇಕ ಜನಪ್ರಿಯ ಮಹಿಳಾ ಬರಹಗಾರ್ತಿಗಿಂತ ತಮ್ಮ ಕಾಳಜಿಯಿಂದ ಹೊಸ ಸಾಂಸ್ಕೃತಿಕ ಪರಿಸರ, ಬದುಕು ಮತ್ತು ತಾತ್ವಿಕತೆಯಿಂದ ಭಿನ್ನವಾಗಿ ಬರೆದವರಾಗಿದ್ದಾರೆ. ಇವರು ೩೦ಕ್ಕೂ ಹೆಚ್ಚು ಕಾದಂಬರಿಗಳನ್ನು ಬರೆದಿದ್ದಾರೆ. ಇವರ ಕಾದಂಬರಿಗಳ ಜಗತ್ತು ತಳಸಮುದಾಯ ಕೇಂದ್ರಿತವಾಗಿವೆ. ಇವರ ಕಾದಂಬರಿಗಳಲ್ಲಿ ಹಳ್ಳಿ, ಕೇರಿ, ನಗರ ಪ್ರದೇಶದಲ್ಲಿನ ಜನಸಾಮಾನ್ಯರ ಜೀವನದ ಸ್ಥಿತ್ಯಂತರವನ್ನು ಚಿತ್ರಿಸಿರುವುದು ಕಂಡುಬರುತ್ತದೆ. ಹಳ್ಳಿಯಲ್ಲಿ ಭೂಮಾಲೀಕರ ಜೀತದಾಳುಗಳಾಗಿ ದುಡಿಯುವಂತಹ ಮತ್ತು ನಗರಕ್ಕೆ ಬಂದರೆ ಅಲ್ಲಿ ಬೇರೆ ಬೇರೆ ದಂಧೆ ಮಾಡುವ ಕೂಲಿಗಳು, ರಿಕ್ಷಾ, ಲಾರಿ ಚಾಲಕರು, ಕೆಲಸಗಾರರು, ಮನೆಗೆಲಸ ಮಾಡುವ ಹೆಂಗಸರು ಇವರ ಕಾದಂಬರಿಗಳ ನಾಯಕ ನಾಯಕಿಯರಾಗಿ ಕಂಡುಬರುತ್ತಾರೆ. ಇವರು ಬಡತನ, ಮೂಢನಂಬಿಕೆ, ಸಂಪ್ರದಾಯಗಳ ದಾಸರಾಗಿ ಬಳಲುವವರು. ಕೆಳವರ್ಗದ ಗಂಡಸು ನಿಯತ್ತಿನ ಕೊರತೆಯಿಂದ ಅಸಹಾಯಕರಾದರೆ, ಹೆಂಗಸರು ಬಲಿಷ್ಠರಾಗಿರುವಂತಹ ಪಾತ್ರ ಚಿತ್ರಣವನ್ನು ಕಟ್ಟಿಕೊಡುತ್ತಾರೆ. ಸಾಮಾನ್ಯ ಜನರು ನಿಯತ್ತಿನಿಂದ ಇದ್ದರು ಉಳ್ಳವರ ಕೌರ್ಯ ಮತ್ತು ದೌರ್ಜನ್ಯಕ್ಕೆ ಬಲಿಯಾಗಿ ತಮ್ಮ ಬಾಳು ಕೆಡಿಸಿಕೊಂಡು ನರಳುವ ಕೆಳವರ್ಗದ ಹೆಂಗಸರು, ಗಂಡಸರು ಇಲ್ಲಿನ ಫ್ಯೂಡಲ್ ವ್ಯವಸ್ಥೆಗೆ ಬಲಿಯಾಗುವುದು ಇವರ ಕಾದಂಬರಿಗಳಲ್ಲಿ ಚಿತ್ರಣಗೊಂಡಿದೆ. 'ನೀಲಗಂಗಾ', 'ಮಾಪುರದ ತಾಯಿ ಮಕ್ಕಳು', ಹಸಿಮಾಂಸ ಮತ್ತು ಹದ್ದುಗಳು, ಧುಮಸ್ಸು ಚಿಕ್ಕ ದಂದೆ, ಬದುಕು ಮುಂತಾದ ಅನೇಕ ಕಾದಂಬರಿಗಳನ್ನು ಬರೆದಿದ್ದಾರೆ.

**ಮಾಪುರದ ತಾಯಿ ಮಕ್ಕಳು:** ಪ್ರಸ್ತುತ ಕಾದಂಬರಿಯಲ್ಲಿ ಕೆಳವರ್ಗದ ಸಿಂಗಾರಿ ಶಿವರುದ್ರನನ್ನು ಮೆಚ್ಚಿಕೊಂಡು ಮದುವೆಯಾಗುವ ಕನಸು ಕಾಣುತ್ತಾಳೆ. ಆದರೆ ಅದು ಸಾಧ್ಯವಾಗುವುದಿಲ್ಲ. ಆ ಊರಿನ ಮಾಪುರ ತಾಯಿಗೆ ಕೆಳವರ್ಗದವರು ತಮ್ಮ ಹೆಣ್ಣುಮಕ್ಕಳನ್ನು ಅರ್ಪಸಿ ಜೋಗಿಣಿಗೆ ಬಿಡುವುದು ಸಂಪ್ರದಾಯ. ಪದ್ಧತಿ ತಪ್ಪಿದರೆ ತಾಯಿ ತೊಂದರೆ ಅನುಭವಿಸಿ ಸಾವುನೋವಿಗೆ ಗುರಿಯಾಗಬೇಕಾಗುತ್ತದೆ. ಅಷ್ಟೇ ಅಲ್ಲದೆ ಅವರು ಶಾಪಕ್ಕೆ ಗುರಿಯಾಗುತ್ತಾರೆ. ಊರ ಗೌಡ, ಕುಲಕರ್ಣಿ, ಸಾಹುಕಾರ ಇಂತಹ ವ್ಯವಸ್ಥೆಯನ್ನು ಹಿಂದಿನಿಂದಲೂ ರೂಪಿಸಿಕೊಂಡು ಬಂದಿದ್ದಾರೆ. ಇದನ್ನು ಕೆಳವರ್ಗದವರು ಅನುಸರಿಸುತ್ತಾ ಬಂದಿದ್ದಾರೆ. ಪ್ರತಿವರ್ಷ ತಾಯಿಗೆ ಅರ್ಪಿಸಿಬಿಟ್ಟ ಹರೆಯದ ಜೋಗಿಣಿಯರನ್ನು ಊರ ಉಳ್ಳವರು ಮೊದಲು ಸಾಕಾಗುವವರೆಗೆ ಭೋಗಿಸಿ ಬಿಡುತ್ತಾರೆ. ನಂತರ ಈ ಜೋಗಿಣಿಯರು 'ತಾಯಿ'ಯ ಹೆಸರಿನಲ್ಲಿ ಮೈಮಾರಿಕೊಳ್ಳುತ್ತ ತಾಯಿಸೇವೆಯಲ್ಲಿ ಬದುಕುತ್ತಾರೆ. ಕೆಳವರ್ಗದ ಕುಟುಂಬಗಳಲ್ಲಿ ಒಬ್ಬರಾದರೂ ತಪ್ಪದೆ 'ತಾಯಿ'ಗೆ

ಅರ್ಪಣೆಯಾಗಲೇಬೇಕು. ಚಂದ್ರಪ್ಪ ದುರ್ಗಪ್ಪರ ಸಿಂಗಾರಿಯನ್ನು ನೋಡಿದ ಕುಲಕರ್ಣಿಗೆ ನಿದ್ದೆ ಬರಲಿಲ್ಲ. ಅವಳನ್ನು ತನ್ನ ಹಾಸಿಗೆ ಎಳೆದುಕೊಳ್ಳಬೇಕಾದರೆ ಸಿಂಗಾರಿ ಜೋಗತಿಯಾಗಬೇಕು. ಆದರೆ ಸಿಂಗಾರಿ ಇದಕ್ಕೆ ಒಪ್ಪುವುದಿಲ್ಲ. ಅದರ ಬದಲಾಗಿ ತಾನು ಪ್ರೀತಿಸಿದ ಶಿವರುದ್ರಪ್ಪನನ್ನು ಮದುವೆಯಾಗುವುದಕ್ಕೆ ಮುಂದಾಗುತ್ತಾಳೆ. ಆದರೆ ಇದು ಊರ ವ್ಯವಸ್ಥೆಯ ವಿರುದ್ಧವಾಗಿರುತ್ತದೆ. ಆದ್ದರಿಂದ ಅವಳನ್ನು ಜೋಗಿಣಿಯಾಗಿ ಬಿಡುವುದು ಅನಿವಾರ್ಯವಾಗುತ್ತದೆ. ಇದನ್ನು ತಪ್ಪಿಸಲು ಶಿವರುದ್ರಪ್ಪ ಜಾತ್ರೆಯ ದಿನ ಹೋರಾಟಕ್ಕೆ ನಿಲ್ಲುತ್ತಾನೆ. ಆದರೂ ಇವಳು ಕುಲಕರ್ಣಿಯ ವಶವಾಗುತ್ತಾಳೆ. ನಂತರ ವಂಚಕರ ಜಾಲಕ್ಕೆ ಸಿಕ್ಕ ಸಿಂಗಾರಿ ಬಾಂಬೆ ಸೇರುತ್ತಾಳೆ. ನಂತರ ಒಬ್ಬ ಶೇಠ್ ಅವಳನ್ನು ಕೊಂಡುಕೊಳ್ಳುತ್ತಾನೆ. ಆದರೆ ಅವಳು ನೋವಿನಲ್ಲೂ ಶ್ರೀಮಂತ ಜೀವನ ಸಾಗಿಸುತ್ತಾಳೆ. ಶೇಠ್ ಸಾಯಲು ಆಸ್ತಿಯೆಲ್ಲ ಅವಳಿಗೆ ಸಿಗುತ್ತದೆ. ಪುನಃ ಅವಳು ಹಳ್ಳಿಗೆ ಬರುತ್ತಾಳೆ ಮತ್ತು ಮಾಪುರದ ತಾಯಿ ಜಾತ್ರೆಯಲ್ಲಿ ಆಗುವ ಜೋಗಿಣಿಯನ್ನು ಪೊಲೀಸ್ ವ್ಯವಸ್ಥೆಯಿಂದ ತಪ್ಪಿಸುತ್ತಾಳೆ. ಮಾದೇವಿಯನ್ನು ಶಂಕ್ರಪ್ಪನವರಿಗೆ ಮದುವೆ ಮಾಡಿಸುತ್ತಾಳೆ. ಜೋಗಿಣಿ ಬಿಟ್ಟ ಹುಡುಗಿಯರನ್ನು ಬಾಂಬೆಗೆ ಸಾಗಿಸುವ ಒಂದು ಗ್ಯಾಂಗ್ ಸಿಂಗಾರಿಯ ಇಂತಹ ಕೆಲಸದಿಂದ ಹಾನಿಯಾಗುವುದನ್ನು ಕಂಡು ಆಕೆಯನ್ನು ಕೊಲ್ಲಿಸುತ್ತಾರೆ. ಕೇರಿಯಲ್ಲಿ ಹುಟ್ಟಿ ಬೆಳೆದ ಹುಡುಗಿಯರನ್ನು ಜೋಗಿಣಿಯನ್ನಾಗಿ ಮಾಡಿ ನಂತರ ಭೋಗಿಸುವುದು 'ಉಳ್ಳವರ' ಕುತಂತ್ರವಾಗಿದೆ. ತಮ್ಮ ಜೀತದಾಳುಗಳಿಗೆ ಹೆಂಡತಿಯರಾಗಿ ಮದುವೆ ಮಾಡಿಕೊಂಡು ಕೇರಿಗೆ ಬರುವ ಹೆಂಗಸರನ್ನು ಭೋಗಿಸುವುದಕ್ಕೆ ಒಂದು ವ್ಯವಸ್ಥೆಯನ್ನು ರೂಪಿಸಿಕೊಂಡಿರುವುದು ಈ ಕಾದಂಬರಿಯಲ್ಲಿ ರೂಪುಗೊಂಡಿದೆ.

**ಸಣ್ಣಗೌಡಸಾನಿ(ಶಾಂತರಸ):** ಈ ಕಾದಂಬರಿಯಲ್ಲಿ ಮುಸ್ಲಿಂ ಸಮುದಾಯಕ್ಕೆ ಸೇರಿದ ಜಾತಿಗೇರ ಎಂಬ ಉಪಪಂಗಡದ ಜನಾಂಗೀಯ ಬದುಕಿನ ಚಿತ್ರಣವಿದೆ. ಈ ಸಮುದಾಯದವರು ಹಾಡುಗಾರಿಕೆ ಮತ್ತು ಅಭಿನಯವನ್ನು ರೂಢಿಸಿಕೊಂಡ ಅಲೆಮಾರಿ ಕಲಾವಿದರಾಗಿದ್ದಾರೆ. ಇವರು ಊರಿನಿಂದ ಊರಿಗೆ ಅಲೆಯುತ್ತ ಗಂಡು-ಹೆಣ್ಣು ಕೂಡಿಯೇ 'ಸಣ್ಣಾಟವನ್ನು' ಹಾಡುತ್ತಾರೆ ಹಾಗೂ ಕೂಡಿಯೇ ಇರುತ್ತಾರೆ. ಇದರಿಂದ ಅವರು ತಮ್ಮ ಉಪಜೀವನವನ್ನು ನಡೆಸುತ್ತಾರೆ. ಕಾಲಾಂತರದಲ್ಲಿ ಈ ಜನಾಂಗದವರು 'ಮೈಮಾರಿಕೊಳ್ಳುವ' ಪದ್ಧತಿಯನ್ನು ಅನುಸರಿಸುತ್ತಾರೆ. ಊರಿಂದ ಊರಿಗೆ ಕಲಾ ಪ್ರದರ್ಶನಕ್ಕೆ ಹೋದಾಗ ಈ ಜನಾಂಗದಲ್ಲಿ ಸುಂದರ ಹೆಣ್ಣುಗಳನ್ನು ಫ್ಯೂಡಲ್‌ಗಳು 'ಖಾಯಂ' ಇಟ್ಟುಕೊಳ್ಳುವಂತಹದು ಕಂಡುಬರುತ್ತದೆ. ಇವರು ಒಬ್ಬ ಒಳ್ಳೆಯ ಕಲಾವಿದೆಯಾದರೂ ಪ್ರತಿಷ್ಠಿತ ಫ್ಯೂಡಲ್‌ಗಳ ನಿರ್ಬಂಧದಲ್ಲಿ ಬದುಕುವಂತಹದು ಕಂಡುಬರುತ್ತದೆ. ಅದರಂತೆ ಸಣ್ಣಗೌಡಸಾನಿ ಕಾದಂಬರಿಯು ಇದೇ ಸಮುದಾಯದ ಚಿತ್ರಣವನ್ನು ನೀಡುತ್ತದೆ. ಆ ಜನಾಂಗದ 'ಮಾಬಮ್ಮ' (ಮಹಿಮಾಜಾನ್) ಎಂಬ ಮಹಿಳೆಯನ್ನು ಕೇಂದ್ರೀಕರಿಸಿ ನಿರೂಪಿಸಿದ

ಕಾದಂಬರಿಯಾಗಿದೆ. ಮಾಬಮ್ಮ ಎನ್ನುವಂತಹ ಸುಂದರ ಹೆಂಗಸನ್ನು ಪಡೆಯಲು ಒಂದು ಹಳ್ಳಿಯಲ್ಲಿ ಇಬ್ಬರು ಜಮೀನ್ದಾರರ ನಡುವೆ ಪೈಪೋಟಿ ನಡೆಯುತ್ತದೆ. ಆದರೆ ಅವಳು ಒಬ್ಬ ಇಷ್ಟವಾದ ಜಮೀನ್ದಾರನನ್ನು ಆಶ್ರಯಿಸುತ್ತಾಳೆ. ಇದರಿಂದ ದಾಯಾದಿಗಳ ಹಗೆತನ ಹೆಚ್ಚಾಗಿ ಊರಿನ ನೆಮ್ಮದಿ ಹಾಳಾಗುತ್ತದೆ. ಕೊನೆಗೆ ಮಾಬಮ್ಮನ ಬದುಕು ಅತಂತ್ರ ಸ್ಥಿತಿಯನ್ನು ತಲುಪಿ ಸಾವಿನೊಂದಿಗೆ ಮುಕ್ತಾಯವಾಗುತ್ತದೆ. ಇದು ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ನಡೆಯುವಂತಹ ವಾಸ್ತವ ಸಂಗತಿಯಾಗಿದೆ.

**ಗೋಹರ ಜಾನ್ ಮಾಲತಿ ಮತ್ತು ನಾನು(ಚಂದ್ರಕಾಂತ ಕೂಸನೂರು):** ಪ್ರಸ್ತುತ ಕಾದಂಬರಿಯು ಕಲಬುರ್ಗಿ ಹಾಗೂ ಸುತ್ತಮುತ್ತಲಿನ ಹತ್ತಾರು ಹಳ್ಳಿಗಳನ್ನು ಕೇಂದ್ರವಾಗಿಟ್ಟುಕೊಂಡು ಇಪ್ಪತ್ತನೆಯ ಶತಮಾನದ ಆರಂಭದಿಂದ ಹಿಡಿದು ಅರವತ್ತರ ದಶಕದವರೆಗೆ ಈ ಪ್ರದೇಶದಲ್ಲಿ ಘಟಿಸಿದ ರಾಜಕೀಯ, ಸಾಮಾಜಿಕ ಸಂಗತಿಗಳನ್ನು ಬಿಂಬಿಸಿದೆ. ಪ್ರಮುಖವಾಗಿ ಹೊಸೂರಿನ ರಾಜಕೀಯ ಮತ್ತು ಈ ರಾಜಕೀಯಕ್ಕೆ ಬಲಿಯಾದಂತೆ ಕಾಣುವ ಮಧ್ಯಮವರ್ಗದ ಬ್ರಾಹ್ಮಣ ಕುಟುಂಬವೊಂದರ ಚಿತ್ರಣ ಈ ಕಾದಂಬರಿಯ ಒಂದು ಭಾಗವಾಗಿದೆ. ನಿಜಾಮರ ಆಡಳಿತಕ್ಕೆ ಒಳಪಟ್ಟಿದ್ದ ಕಲಬುರ್ಗಿ ಪ್ರದೇಶದಲ್ಲಿನ ನಿಜಾಮನ ಆಳ್ವಿಕೆ, ಸ್ವಾತಂತ್ರ್ಯ ಹೋರಾಟ, ರಜಾಕಾರರ ಹಾವಳಿ, ಸ್ವತಂತ್ರ ಭಾರತದಲ್ಲಿ ಸಂಸ್ಥಾನ ವಿಲೀನಗೊಳಿಸಲು ನಿರಾಕರಿಸಿ ಸ್ವಾತಂತ್ರ್ಯಕ್ಕಾಗಿ ನಿಲ್ಲಲು ನಿರ್ಧರಿಸಿದ್ದರ ಪರಿಣಾಮವಾಗಿ ದಂಗೆ, ಕೋಮುಗಲಭೆ, ಅತ್ಯಾಚಾರ, ಕೊಲೆ ಮುಂತಾದವುಗಳು ನಡೆದವು. ಇವನ್ನು ನಿಯಂತ್ರಿಸಲು ಸ್ವತಂತ್ರ ಭಾರತದ ಸೈನ್ಯ ಈ ಪ್ರದೇಶದಲ್ಲಿ ಪ್ರವೇಶಿಸಿದ್ದು, ನಿಜಾಮರ ಆಡಳಿತ ಕೊನೆಗೊಂಡಿದ್ದು, ನಂತರ ಹೊಸ ಆಡಳಿತ ಬಂದಾಗ ಆಡಳಿತ ಮಟ್ಟದಲ್ಲಿ ಉಂಟಾದ ಬಿಕ್ಕಟ್ಟುಗಳನ್ನು ಇನ್ನೊಂದು ಭಾಗವಾಗಿ ಚಿತ್ರಿಸಲಾಗಿದೆ. ಕಾದಂಬರಿಯ ನಾಯಕ ರವೀಂದ್ರ ಖಾಸಗಿ ಬದುಕಿನಲ್ಲಿ ಮಾಲತಿ, ಗೋಹಾರಜಾನ್ ಬಂದು ಹೋಗುತ್ತಾರೆ. ಹೀಗೆ ಈ ಪ್ರಾಂತದ ಪರಿಸರ, ವ್ಯಕ್ತಿಯಲ್ಲಿನ ಏರಿಳಿತಗಳು ಈ ಕಾದಂಬರಿಯಲ್ಲಿ ವ್ಯಕ್ತವಾಗಿವೆ.

**ಕುರುಮಯ್ಯ ಮತ್ತು ಅಂಕುಶದೊಡ್ಡಿ(ಜಂಬಣ್ಣ ಅಮರಚಿಂತ):** ಇದು ಕೊರವ ಸಮುದಾಯವನ್ನು ಪ್ರತಿನಿಧಿಸುವ ಕಾದಂಬರಿಯಾಗಿದೆ. ಇವರು ತಮ್ಮದೆಯಾದ ಸಂಪ್ರದಾಯ ರೀತಿ-ರಿವಾಜು ಮತ್ತು ಕಟ್ಟುಪಾಡಿನಲ್ಲಿ ತಮ್ಮದೇ ಆದ ಬದುಕನ್ನು ಸಾಗಿಸುತ್ತಾರೆ. ಇಂತಹ ಸಂದರ್ಭದಲ್ಲಿ ಕ್ಷಿಪ್ರಗತಿಯಲ್ಲಿ ಬೆಳೆಯುತ್ತಿರುವ ಆಧುನಿಕ ಸಮಾಜದ ಬದಲಾವಣೆಗೆ ಹೊಂದಿಕೊಳ್ಳಲು ಈ ಸಮುದಾಯಗಳು ಹೆಣಗಾಡುತ್ತಿವೆ. ಆಧುನಿಕತೆಯ ಛಾಯೆ ಈ ಸಮುದಾಯದ ಮೇಲೆ ಬಿದ್ದಾಗ ಅದರ ಮೂಲಚಹರೆಗಳು ಕಳೆದುಕೊಂಡು ಇಕ್ಕಟ್ಟಿನ ಪರಿಸ್ಥಿತಿಯನ್ನು ಎದುರಿಸುತ್ತಿವೆ. ವೈಜ್ಞಾನಿಕತೆ ಮತ್ತು ಜಾಗತಿಕತೆಯ ಪ್ರಕ್ರಿಯೆಯಿಂದ ಏಕಮುಖ ಸಂಸ್ಕೃತಿ ರೂಪಗೊಳ್ಳುತ್ತಿರುವಾಗ ಈ ಮನುಷ್ಯನು ಅದಕ್ಕೆ ಹೊಂದಿಕೊಳ್ಳಬೇಕಾದ ಪರಿಸ್ಥಿತಿಯಿದೆ. ಇದಕ್ಕೆ ತಳಸಮುದಾಯಗಳು ಹೊರತಾಗಿಲ್ಲ.

ಕೊರವರು ತಮ್ಮ ಬದುಕಿಗೆ ಸಂಬಂಧಿಸಿದಂತೆ ಎರಡು ಬಗೆಯ ಸಂಘರ್ಷಗಳಿಗೆ ಒಳಗಾಗಿರುವಂತಹದನ್ನು ಕಾಣುತ್ತೇವೆ. ಒಂದು ತಮ್ಮ ಬದುಕಿನ ರೀತಿ-ನೀತಿ, ಸಂಪ್ರದಾಯ, ಸಂಸ್ಕೃತಿಗಳ ಜೊತೆ ಒಂದು ಬಗೆಯ ತಾತ್ವಿಕ ಸಂಘರ್ಷ. ಇನ್ನೊಂದು ಬಗೆಯಲ್ಲಿ ಹೊಟ್ಟೆಪಾಡಿಗಾಗಿ ಅನ್ಯರನ್ನು ಅವಲಂಬಿಸುವುದರಿಂದ ಹೊರಜಗತ್ತಿನ ಶಕ್ತಿಗಳ ಜತೆ ಸಂಘರ್ಷಕ್ಕೆ ನಿಲ್ಲುವಂತಹ ಸ್ಥಿತಿಯನ್ನು ಈ ಕಾದಂಬರಿಯಲ್ಲಿ ಚಿತ್ರಿಸುತ್ತದೆ.

**ಗತಿ(ಬಿ.ಟಿ.ಲಲಿತಾನಾಯಕ)**: ಪ್ರಸ್ತುತ ಕಾದಂಬರಿ ಕೂಡ ಲಮಾಣಿ ಬುಡಕಟ್ಟು ಜನಾಂಗದವರ ಬದುಕಿನ ಕುರಿತು ಅನಾವರಣಗೊಳಿಸುತ್ತದೆ. ಲಮಾಣಿ ಜನಾಂಗವು ಸಹ ಕೊರವ ಸಮಾಜದಂತೆ ಊರ ಹೊರಗೆ ಬದುಕುವಂತಹ ತಳಸಮುದಾಯವಾಗಿದೆ. ಇದಕ್ಕೆ ಒಂದು ನಿರ್ದಿಷ್ಟವಾದ ಕುಲಕಸಬು ಇಲ್ಲದಿದ್ದರೂ ಕಟ್ಟಿಗೆಯನ್ನು ಮಾರುವುದು, ಇಲ್ಲದಿದ್ದರೆ ಕೂಲಿಯನ್ನು ಮಾಡಿ ಬದುಕುವ ಶ್ರಮಜೀವಿಗಳ ಸಮಾಜ ಇದಾಗಿದೆ. ಇಂತಹ ಸಮುದಾಯದ ಒಳಗೆ ಅನಾಗರಿಕತೆಯಿಂದ ಅನೇಕ ಸಂಕಷ್ಟಗಳನ್ನು ಅನುಭವಿಸುತ್ತಾರೆ. ಅಲ್ಲಿ ಪುರುಷ ಸಮಾಜ ತನ್ನ ದೌರ್ಜನ್ಯದಿಂದ ಹೆಣ್ಣನ್ನು ಹೇಗೆ ನಲುಗಿಸಿದೆ ಎನ್ನುವಂತಹದು ಕಂಡುಬರುತ್ತದೆ. ಜೊತೆಗೆ ತಾಳ್ಮೆಯಿಂದ ಜೀವನವನ್ನು ಸುಖ ಸಮೃದ್ಧಿಯ ಕಡೆಗೆ ತರುವಂತಹ ಹೆಣ್ಣನ್ನು ಹೇಗೆ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಸಿಲುಕಿಸುತ್ತದೆ ಮತ್ತು ಕೊನೆಗೆ ಅವಳು ಅಸಹಾಯಕತೆಯಿಂದ ದುರಂತ ಸ್ಥಿತಿಯನ್ನು ಹೇಗೆ ತಲುಪುತ್ತಾಳೆ ಎನ್ನುವಂತಹದ್ದನ್ನು ಇದು ನಿರೂಪಿಸುತ್ತದೆ.

**ಹವನ(ಮಲ್ಲಿಕಾರ್ಜುನ ಹಿರೇಮಠ)**: ಇದು ಪರಂಪರೆ ಮತ್ತು ಆಧುನಿಕತೆಯನ್ನು ಆಧಾರವಾಗಿಟ್ಟುಕೊಂಡು ಬರೆದಂತಹ ಕಾದಂಬರಿಯಾಗಿದೆ. ಇದು ಕೂಡ ಲಮಾಣಿ ತಾಂಡದ ಸಮುದಾಯದ ಕಥನವಾಗಿದೆ. ಕಾದಂಬರಿಕಾರರು ಈ ಸಮುದಾಯಕ್ಕೆ ಹೊರಗಿನವರಾದರೂ ಈ ಜನಾಂಗದ ಬದುಕನ್ನು ವಾಸ್ತವ ನೆಲೆಯಲ್ಲಿ ಕಟ್ಟಿಕೊಟ್ಟಿದ್ದಾರೆ. ಇಲ್ಲಿ ಒಂದು ಸಮುದಾಯವು ತನ್ನ ಮೂಲ ಚಹರೆಗಳನ್ನು ಕಳೆದುಕೊಂಡು ಆಧುನಿಕತೆಗೆ ತೆರೆದುಕೊಳ್ಳುವುದನ್ನು ಚಿತ್ರಿಸಲಾಗಿದೆ. ಈ ಒಂದು ಸಮುದಾಯವು ತನ್ನ ಏಳಿಗೆಯನ್ನು ತಾನೇ ನಿಯಂತ್ರಿಸಿಕೊಂಡು ಇನ್ನೊಂದು ಪ್ರಪಂಚದ ನಾಗಲೋಟದಂತಹ ಬದಲಾವಣೆಗೆ ಹೊಂದಿದಂತೆ ಅದರ ಸೋಂಕು, ಬಿಸಿಯು ಮೂಲ ಸಂಸ್ಕೃತಿಗೆ ತಾಕಿದಾಗ ಈ ಸಮುದಾಯದಲ್ಲಿ ಭಿನ್ನತೆ ಸಹಜವಾಗಿ ಕಾಣುತ್ತದೆ. ಬೆಳವಣಿಗೆ ಮತ್ತು ಅಭಿವೃದ್ಧಿಯಿಂದ ಇವರ ಮೂಲಸಂಸ್ಕೃತಿಗೆ ಧಕ್ಕೆ ಬರುತ್ತದೆ. ಇದರಿಂದ ಈ ಸಮುದಾಯವು ತನ್ನ ಮೂಲ ರೂಪವನ್ನು ಕಳೆದುಕೊಳ್ಳುತ್ತದೆ. ಬದಲಾವಣೆ ಹಿಂದಿನದನ್ನು ನಾಶ ಮಾಡಿದಂತೆ, ಮುಂದಿನದನ್ನು ಅರಾಜಕತೆ ಎಂದು ಭಾವಿಸುವ ತಲೆಮಾರುಗಳ ಸಂಘರ್ಷದ ನಡುವೆಯೇ ಜೀವನ ಮುಮ್ಮುಖವಾಗಿ ಚಲಿಸುತ್ತದೆ. ನಾಶದ ಒಳಗೆ ಹೊಸ ಹುಟ್ಟುಗಳಿರುತ್ತವೆ. ಕಾದಂಬರಿಕಾರರು ಅನೇಕ ನಿರೂಪಣ ತಂತ್ರ ಬಳಸಿ ಈ ಕಾದಂಬರಿಗೆ ಒಂದು ರೂಪ ಕೊಡುವಂತಹ ಪ್ರಯತ್ನ ಮಾಡಿದ್ದಾರೆ.

ಕಾದಂಬರಿಯ ಪರಂಪರೆಯನ್ನು ಗ್ರಹಿಸಿದಾಗ ಪ್ರಮುಖ ಕಾದಂಬರಿಕಾರರಿಗೆ ದೊರಕಿರುವಂತಹ ಪರಿಸರ ಪ್ರೋತ್ಸಾಹಗಳು ಈ ಭಾಗದ ಕಾದಂಬರಿಕಾರರಿಗೆ ದೊರೆಯಲಿಲ್ಲ. ಅವರು ಬರೆಯಲು ಮನಸ್ಸು ಮಾಡಿ ಬರೆಯಲು ಹೊರಟರೆ ಸಿಗುವ ವಸ್ತು ನಿಜಾಮ ಸರ್ಕಾರದ ಆಡಳಿತ, ಅದೇ ಅವಧಿಯಲ್ಲಿ ನಡೆದ ರಜಾಕಾರರ ದಾಳಿ. ಜ್ಯೋತಿ ಕುಲಕರ್ಣಿಯವರ ಸರ್ಕಾರ ಎಂಬ ಕಾದಂಬರಿ ಹೈದರಾಬಾದ್ ನಿಜಾಮನನ್ನು ಕುರಿತಿದೆ. ಹಾಗೆಯೇ ನಿಜಾಮರ ಅರಮನೆಗಳಲ್ಲಿ ನಡೆಯುವ ಘಟನೆಗಳು, ಜಮೀನ್ದಾರಿ ವ್ಯವಸ್ಥೆ, ನಿಜಾಮರ ಅಧೀನದಲ್ಲಿ ನಡೆಯುವ ಕ್ರೌರ್ಯ, ದುಡಿಯುವ ವರ್ಗ, ಸಾಮಾನ್ಯರ ಬವಣೆ, ತವಕ, ತಲ್ಲಣ ಈ ಮೂರು ಅಂಶಗಳನ್ನು ಈ ಕಾದಂಬರಿಗಳಲ್ಲಿ ಅನಾವರಣಗೊಳಿಸಲಾಗಿದೆ. ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಕಾದಂಬರಿಕಾರರು ಈ ಪ್ರದೇಶದ ಆಡುನುಡಿಯನ್ನು ಸಾಹಿತ್ಯದ ಬರವಣಿಗೆ ಮತ್ತು ನಿರೂಪಣೆ ಶೈಲಿಯಲ್ಲಿ ಬಳಸಿಕೊಂಡಿದ್ದಾರೆ. ಹೀಗೆ ಕಾದಂಬರಿ ಅಥವಾ ಕಥನದ ಮೂಲಕ ಇಲ್ಲಿನ ಬದುಕನ್ನು ಇಡಿಯಾಗಿ ಚಿತ್ರಿಸಿದಂತಹ ಅಂಶಗಳು ನಮಗೆ ಕಾಣುತ್ತೇವೆ.

ಅಧ್ಯಾಯ ಮೂರು

# ಮೂರು ಸಮುದಾಯಗಳ ಸಂಕ್ಷಿಪ್ತ ಪರಿಚಯ

೩.೧. ಮುಸ್ಲಿಂ ಸಮುದಾಯದ ಸಂಕ್ಷಿಪ್ತ ಪರಿಚಯ

೩.೨. ಕೊರವ ಸಮುದಾಯದ ಸಂಕ್ಷಿಪ್ತ ಪರಿಚಯ

೩.೩. ಲಂಬಾಣಿ ಸಮುದಾಯದ ಸಂಕ್ಷಿಪ್ತ ಪರಿಚಯ

ಅಧ್ಯಾಯ ಮೂರು

# ಮೂರು ಸಮುದಾಯಗಳ ಸಂಕ್ಷಿಪ್ತ ಪರಿಚಯ

ಭಾರತೀಯ ಸಾಮಾಜಿಕ ವ್ಯವಸ್ಥೆಯು ಅನೇಕ ಜಾತಿ, ಧರ್ಮ, ಸಂಸ್ಕೃತಿಯನ್ನು ಒಳಗೊಂಡಿರುವ ಬೃಹತ್ ಸಾಮಾಜಿಕ ವ್ಯವಸ್ಥೆಯಾಗಿದೆ. ಅಷ್ಟೇ ಅಲ್ಲದೆ ಇಲ್ಲಿ ಪುರೋಹಿತಶಾಹಿ ವ್ಯವಸ್ಥೆಯು ಶ್ರೇಣೀಕೃತ ವ್ಯವಸ್ಥೆಯ ಅಡಿಯಲ್ಲಿ ಶ್ರೇಷ್ಠ-ಕನಿಷ್ಠ ಪರಿಕಲ್ಪನೆಯನ್ನು ಹುಟ್ಟುಹಾಕಿತು. ತದನಂತರ ಅದೇ ವರ್ಗವ್ಯವಸ್ಥೆಯು ವರ್ಣವಾಗಿ ರೂಪತಾಳಿದೆ. ಈ ಶ್ರೇಣೀಕರಣದ ಉಚ್ಚ ಸ್ಥಾನದಲ್ಲಿದ್ದ ವರ್ಗವು ಉನ್ನತವರ್ಗವಾಗಿ, ಕೆಳಸ್ತರದಲ್ಲಿದ್ದ ವರ್ಗ 'ಕೀಳು' ವೃತ್ತಿ ಮಾಡುವವರಾಗಿ, ಶೂದ್ರರಾಗಿ ರೂಪಗೊಂಡಿದ್ದಾರೆ. ಮುಂದೆ ಇವರು ಉನ್ನತವರ್ಗಗಳ ಅಧೀನರಾಗಿ ಜೀವನ ನಡೆಸಿಕೊಂಡು ಬಂದಿದ್ದಾರೆ. ಈ ತಳಸಮುದಾಯಗಳಾದ ಹೊಲೆಯ, ಮಾದಿಗ ಹಾಗೂ ಇತರೆ ಅಲೆಮಾರಿ ಬುಡಕಟ್ಟು ಸಮುದಾಯಗಳು ಉನ್ನತವರ್ಗಗಳಿಂದ ಶೋಷಣೆಯನ್ನು ಅನುಭವಿಸಿಕೊಂಡು ಬಂದಿವೆ. ಇವರು 'ಕೀಳು' ವೃತ್ತಿ ಮಾಡುವ ರೀತಿಯಿಂದ ಮತ್ತು ಜಾತಿ ಅಸಮಾನತೆಯಿಂದ ತಿರಸ್ಕೃತರಾಗಿ ಸಮಾಜದ ಅಂಚಿನಲ್ಲಿ ಬದುಕುವಂತಾಗಿದೆ. ಇವರಿಗೆ ಅಸ್ತಿತ್ವದ ಬದುಕು ಇಲ್ಲದ ಕಾರಣ ಅಲೆಮಾರಿ, ಅರೆಅಲೆಮಾರಿಗಳಾಗಿ ತಮ್ಮದೇ ಆದ ಬುಡಕಟ್ಟುಗಳನ್ನು ನಿರ್ಮಿಸಿಕೊಂಡು ಮತ್ತೆ ಕೆಲವರು ಅಧೀನರಾಗಿ ಜೀವನ ಸಾಗಿಸಿಕೊಂಡು ಬಂದಿದ್ದಾರೆ. ಕೆಲವು ಸಮುದಾಯಗಳು ಅರಣ್ಯ ಮತ್ತು ಅದರ ಸಂಪತ್ತನ್ನು ನಂಬಿಕೊಂಡು ಬದುಕು ಸಾಗಿಸುತ್ತ ಬಂದಿವೆ. ಅವುಗಳಲ್ಲಿ ತಳಸಮುದಾಯಗಳಾದ ಕೊರವ, ಲಮಾಣಿ ಮತ್ತು ಜಾತಿಗೇರ ಸಮುದಾಯಗಳು ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿ ಪ್ರಮುಖವಾಗಿ ಕಂಡುಬರುತ್ತವೆ.

ಪ್ರತಿಯೊಂದು ಬುಡಕಟ್ಟು ಸಮುದಾಯಗಳು ಅಲೆಮಾರಿಗಳಾಗಿರುವುದಲ್ಲದೆ ಬೇರೆ ಬೇರೆ ಪರಿಸರದಲ್ಲಿ ಜೀವಿಸುತ್ತಿರುತ್ತವೆ. ಇಂತಹ ಪ್ರತಿಯೊಂದು ಸಮುದಾಯಗಳು ತಮ್ಮದೆಯಾದ ಕುರುಹು, ಚಹರೆಗಳನ್ನು ಹೊಂದಿದ್ದು, ಅವು ಒಂದಕ್ಕೊಂದು ಭಿನ್ನವಾಗಿರುತ್ತವೆ. ಇಂತಹ ತಳಸಮುದಾಯಗಳಿಗೆ ಅದರದೆ ಆದ ಸಾಂಸ್ಕೃತಿಕ ಜೀವನ, ವೃತ್ತಿ, ನೀತಿಸಂಹಿತೆ, ಸಂಪ್ರದಾಯ, ಆಚಾರ-ವಿಚಾರ, ನಂಬಿಕೆ, ಧಾರ್ಮಿಕ ಆಚರಣೆಗಳು ಕಂಡುಬರುತ್ತವೆ. ಜಾತಿವ್ಯವಸ್ಥೆ ಸಾಮಾಜಿಕ,

ಆರ್ಥಿಕ, ರಾಜಕೀಯ ಸ್ಥಿತಿಗತಿಗಳು ಸಹ ಅಲ್ಪಸ್ವಲ್ಪ ಸಾಮ್ಯತೆ ಹೊಂದಿರುವಂತೆ ಕಾಣುತ್ತವೆ. ಇಂತಹ ವಿಶಿಷ್ಟ ಬದುಕನ್ನು ಕಟ್ಟಿಕೊಂಡಿರುವ ಈ ಮೂರು ಸಮುದಾಯಗಳು ಸಮಾಜದ ಅಂಚಿನಲ್ಲಿ ಎಲೆಮರೆಯ ಕಾಯಿಯಂತೆ ಬದುಕುತ್ತಿವೆ. ಇಂತಹ ಜನಾಂಗಗಳನ್ನು ಅಧ್ಯಯನಕ್ಕೆ ಒಳಪಡಿಸಿ, ಸಾಮಾಜಿಕ ವ್ಯವಸ್ಥೆಯಲ್ಲಿ ಇವುಗಳ ಸ್ಥಿತಿಗತಿಯನ್ನು ಪರಿಚಯಿಸುವುದಲ್ಲದೆ ಅವರ ಸಂವೇದನೆಗಳನ್ನು ಅರಿಯುವುದು ಮತ್ತು ಇವರು ಬದಲಾದ ಸಮಾಜದಲ್ಲಿ ತಮ್ಮ ಸಾಂಸ್ಕೃತಿಕ ಜೀವನ ಉಳಿಸಿಕೊಳ್ಳಲು ಹೇಗೆ ಹೆಣಗಾಡುತ್ತಿವೆ ಎಂಬುದನ್ನು ಗುರುತಿಸುವುದು ಮಾತ್ರವಲ್ಲದೆ ಬದಲಾದ ಸಮಾಜದಲ್ಲಿ ಅವರ ಅಸ್ತಿತ್ವದ ಹುಡುಕಾಟ, ಆಧುನಿಕತೆ ಮತ್ತು ಪರಂಪರೆಯ ನಡುವಿನ ಸಂಘರ್ಷದ ನೆಲೆಗಳನ್ನು ಗುರುತಿಸುವುದು ಪ್ರಸ್ತುತ ಅಧ್ಯಯನದ ಆಶಯವಾಗಿದೆ.

### ೩.೧. ಮುಸ್ಲಿಂ ಸಮುದಾಯ ಸಂಕ್ಷಿಪ್ತ ಪರಿಚಯ

ಮುಸ್ಲಿಂ ಸಮುದಾಯ ಪ್ರಭುತ್ವದ ಕೋಮುವಾಗಿದ್ದ ಕಾರಣ ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯ ನಂತರ ಇವರ ಬದುಕಿನ ಬಗೆಗಿನ ಸ್ಥಿತ್ಯಂತರಗಳನ್ನು ಇಲ್ಲಿನ ಕಥನ, ಕಾದಂಬರಿಗಳು ತಿಳಿಸುತ್ತವೆ. ಮುಸ್ಲಿಂ ಸಮುದಾಯ ಹಿಂದೂಗಳೊಂದಿಗೆ ಸೌಹಾರ್ದಯುತವಾಗಿ ಬಾಳಿ ಬದುಕಿರುವುದು ಕಂಡುಬರುತ್ತದೆ. ಇಂದಿಗೂ ಹೈದರಾಬಾದ್ ಕರ್ನಾಟಕದಲ್ಲಿ ಈ ಸೌಹಾರ್ದ ನೆಲೆಗಳು ಕಂಡುಬರುತ್ತವೆ. ಆದರೆ ಹಿಂದೂ ಮುಸ್ಲಿಂ ಸಮುದಾಯಗಳಲ್ಲಿ ಕೆಲವು ರಜಾಕಾರರಂತಹ ಧೂರ್ತ ಶಕ್ತಿಗಳ ಸ್ವಾರ್ಥದಿಂದಾಗಿ ಇಲ್ಲಿನ ಸೌಹಾರ್ದತೆಯನ್ನು ಹದಗೆಡಿಸಿರುವುದು ಕಂಡುಬರುತ್ತದೆ. ರಜಾಕಾರರ ಹಾವಳಿಯ ಸಂದರ್ಭದಲ್ಲಿ ಅನೇಕ ಕಾದಂಬರಿಗಳು ರಚನೆಯಾದವು. ಅವುಗಳಲ್ಲಿ ಶಾಂತರಸರ 'ಸಣ್ಣಗೌಡಸಾನಿ' ಕಾದಂಬರಿಯು ಒಂದಾಗಿದೆ.

ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿ ಮುಸ್ಲಿಂ ಸಮುದಾಯವು ಬದುಕು ರೂಪಿಸಿಕೊಂಡಿರುವ ಹಿನ್ನೆಲೆಯಿಂದ ಈ ಭಾಗದಲ್ಲಿ ಮುಸ್ಲಿಂ ಸಂವೇದನೆಗಳು ಕಂಡುಬರುತ್ತವೆ. ಆದರೆ ಸ್ವತಃ ಈ ಧರ್ಮದ ಬುರ್ಕಾಪದ್ಧತಿ, ವಿವಾಹ ಪದ್ಧತಿ ಮುಂತಾದ ಸಮುದಾಯಕೇಂದ್ರಿತ ವಿಷಯಗಳಿಗೆ ಸಂಬಂಧಿಸಿದ ಸಂವೇದನೆಗಳು ತಿಳಿದುಬರುವುದಿಲ್ಲ. ಸಮುದಾಯ ಸಾಂಪ್ರದಾಯಿಕ ಬದುಕಿನಲ್ಲಿ ನಲುಗುವ ಸ್ತ್ರೀ ಬದುಕು, ಸ್ತ್ರೀ ಶಿಕ್ಷಣ, ವಿದ್ಯಾವಂತ ಯುವ ಜನಾಂಗದಲ್ಲಿ ಉಂಟಾಗುವ ಹೊಸ ಜಾಗೃತಿ, ಸಮುದಾಯದ ಸ್ವ-ವಿಮರ್ಶೆ ಇತ್ಯಾದಿ ವಿಚಾರಗಳು ಕಂಡುಬರುತ್ತವೆ.

ಒಂದು ಸಮುದಾಯವು ಕಾಲಾನಂತರದಲ್ಲಿ ಕವಲೊಡೆದು ತಮ್ಮದೇ ಆದ ಬದುಕಿನ ರೀತಿಯೊಂದನ್ನು ರೂಪಿಸಿಕೊಂಡಿರುತ್ತದೆ. ಒಂದು ಸಂಸ್ಕೃತಿಯಿಂದ ಪ್ರತ್ಯೇಕಗೊಂಡ ಸಮುದಾಯಗಳಲ್ಲಿ ಜಾತಿಗೇರ, ಪಾತ್ರದವರಂತಹ ಜಾತಿಗಳು ಪ್ರಮುಖವಾಗಿ ಕಂಡುಬರುತ್ತವೆ. ಈ ಸಮುದಾಯಗಳು ಕುರಿತು ಆರಂಭಘಟ್ಟದ ಕಾದಂಬರಿಗಳಲ್ಲಿ ಕಂಡುಬರುವಂತಹ ಸಂವೇದನೆ ನಂತರ ಕಾಲದ

ಸಾಹಿತ್ಯದಲ್ಲಿ ಇವುಗಳ ಉಲ್ಲೇಖವು ವಿರಳವಾಗಿದೆ. ಪಾತ್ರದವರ ಬದುಕು ಹೈದರಾಬಾದ್ ಕರ್ನಾಟಕದಲ್ಲಿ ಆರಂಭದ ಕಾಲಘಟ್ಟದಲ್ಲಿ ಶಾಂತರಸ ಕಥೆ, ಕಾದಂಬರಿಗಳಲ್ಲಿ ಚಿತ್ರಿತವಾಗಿವೆ. ಪಾತ್ರದವರು ನಿರ್ದಿಷ್ಟ ಜಾತಿ ಹಾಗೂ ಧರ್ಮದ ಅಸ್ತಿತ್ವದಿಂದ ವಂಚಿತರಾದವರು. ಸಮಾಜದ ಉನ್ನತ ವರ್ಗದವರನ್ನು, ಇಲ್ಲವೇ ಉಳ್ಳವರನ್ನು ಸಂತೃಪ್ತಿಪಡಿಸುವ ವರ್ಗವಾಗಿ ಮಾತ್ರವೇ ಗುರುತಿಸಲ್ಪಟ್ಟವರು. ಇವರ ಸಂಗೀತ, ನೃತ್ಯ, ಕಲೆಯು ಈ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ವಿಶಿಷ್ಟವಾಗಿರುವಂತಹದು. ಇದರಂತೆ ಇವರ ಬದುಕಿನ ಸಂವೇದನೆಯು ಮಹತ್ವಪೂರ್ಣವಾದದ್ದು. ಪಾತ್ರದವರ ಬದುಕು ಸ್ತ್ರೀಯನ್ನು ಪ್ರಮುಖವಾಗಿ ಆಧರಿಸಿದೆ. ಬೇರೆ ಬೇರೆ ಹಿನ್ನೆಲೆಗಳಲ್ಲಿ ಇವರ ಬದುಕಿನಲ್ಲಿ ಬಂದು ಹೋಗುವ ಪುರುಷನಿಗಿಂತ ಪಾತ್ರದ ಸ್ತ್ರೀ ಬದುಕು ಈ ಸಮುದಾಯದ ಇಡೀ ಸಂವೇದನೆಯನ್ನು ತಿಳಿಸುತ್ತದೆ.

ಉಳ್ಳವರ ಪ್ರತಿಷ್ಠೆಯ ಕಾಮುಕತನದಿಂದ ದುರಂತಮಯವಾದ ಈ ಸಮುದಾಯದ ಮಹಿಳೆಯರ ಬದುಕು ಅಸ್ತಿತ್ವದ ಸ್ಥಾಪನೆಗೆ ನಿರಂತರ ಪರಿತಪಿಸಿ ನರಳುವಂತಹದಾಗಿದೆ. ನೃತ್ಯ, ಸಂಗೀತ, ಕಲೆಯ ಆರಾಧನೆಯಲ್ಲಿ ಮಹಾನ್ ಕಲಾವಿದರಾದರೂ ಉಳ್ಳವರ, ಫ್ಯೂಡಲ್‌ಗಳ ಹಿಡಿತದಲ್ಲಿ ವೇಶ್ಯೆಯರಾಗಿ ಬದುಕುವ ದುರಂತಕ್ಕೆ ಬಲಿಯಾದವರು. ಇವರ ಬದುಕಿನ ಸಂವೇದನೆಯ ಹಲವು ಮಾದರಿಗಳು ಹೈದರಾಬಾದ್ ಕರ್ನಾಟಕದ ಕಥೆ, ಕಾದಂಬರಿ ಸಾಹಿತ್ಯದ ವಸ್ತುವಾಗಿರುವುದು ಕಂಡುಬರುತ್ತದೆ.

ಕಲೆಯನ್ನೇ ಮುಖ್ಯವಾಗಿಟ್ಟುಕೊಂಡು ಬದುಕುವ ಇನ್ನೊಂದು ವರ್ಗ ಜಾತಿಗೇರ ಜನಾಂಗ. ಇದು ಮುಸ್ಲಿಂ ಜನಾಂಗಕ್ಕೆ ಸೇರಿದ ಉಪಪಂಗಡ. ಈ ಜನಾಂಗದ ಬದುಕು ನಿರ್ದಿಷ್ಟ ಜಾತಿಯವರೊಂದಿಗೆ ಸಂಬಂಧವನ್ನು ಉಳಿಸಿಕೊಳ್ಳುವಂತಹದ್ದಲ್ಲ. ಊರಿಂದೂರಿಗೆ ಹೋಗಿ ಇವರು ಆಡುವ ಆಟವೇ(ಸಣ್ಣಾಟ ಮಾದರಿಯ ನಾಟಕ) ಜಾತಿಗೇರರ ಆಟ. ಪಾತ್ರದ ಸ್ತ್ರೀಯರಂತೆ ಈ ಸಮುದಾಯ ಸ್ತ್ರೀಯರ ಬದುಕು ಅತಂತ್ರವನ್ನು ಎದುರಿಸುವಂತಹದು. ಆದರೆ ಕೆಲಮಟ್ಟಿಗೆ ಭಿನ್ನತೆಯನ್ನು ಇವರ ಕಲಾಪ್ರದರ್ಶನಗಳು ಹೊಂದಿವೆ. ಊರಿಂದೂರಿಗೆ ಹೋಗಿ ನಾಟಕ ಮಾಡುವ ಜಾತಿಗೇರ ಕಲೆಗೂ 'ಗಜಲ್‌ಗಾಯನ' ಪಾರ್ಟ್ ಮಾಡುವ ಪಾತ್ರದವರಿಗೂ ವ್ಯತ್ಯಾಸವಿದೆ. ಫ್ಯೂಡಲ್ ವ್ಯವಸ್ಥೆಯಿಂದಾಗಿ ಇಂತಹ ಎರಡು ಬಗೆಯ ಸ್ತ್ರೀಯರ ಬದುಕು ನಿರುಂಬಳವಾಗಿ ಉಳಿದಿಲ್ಲ. ಪಾತ್ರದವರಂತೆ ಇವರೂ ಪ್ರತಿಷ್ಠಿತನೊಬ್ಬನ ಇಚ್ಛೆಗೆ ಅನುಗುಣವಾಗಿ ಸೂಳೆಯಾಗಿ ಬದುಕಬೇಕೆ ವಿನಾ ವೈವಾಹಿಕ ಜೀವನವನ್ನು ಅನುಭವಿಸುವಂತಿಲ್ಲ. ಒಬ್ಬರೊಂದಿಗೆ ಉಳಿಯುವ ಇಲ್ಲವೇ ಬೇರೆಯೆಡೆಗೆ ಹೋಗಿ ಇನ್ನೊಬ್ಬನೊಂದಿಗೆ ಜೀವನ ಕಳೆಯುವುದು, ಸಂಪತ್ತಿದ್ದ ಗೌಡನ ಅಥವಾ ಇಟ್ಟುಕೊಂಡವನ ಸಂಪತ್ತನ್ನು ಕಿತ್ತುಕೊಂಡು ಜೀವನ ಭದ್ರಪಡಿಸಿಕೊಳ್ಳುವ ನೆಲೆಯಲ್ಲಿ ಜಾತಿಗೇರ ಮಹಿಳೆಯರ ಜೀವನ ಕಂಡುಬರುತ್ತದೆ.

ಆದರೆ ಇದು ವಿವಾಹಬಾಹಿರ ಸಂಬಂಧವಾದರೂ ಇಟ್ಟುಕೊಂಡವನಿಗೆ ನಿಷ್ಠಳಾಗಿ ಬದುಕಬೇಕು. ಶಾಂತರಸರು ಚಿತ್ರಿಸುವ 'ಮಾಬಿ'(ಸಣ್ಣಗೌಡಸಾನಿ) ತನ್ನ ಕುಲದ ಹೆಣ್ಣುಗಳ ಜೀವನಕ್ಕಿಂತ ಭಿನ್ನವಾದ ಜೀವನ ಆದರ್ಶಗಳನ್ನು ಹೊಂದಿದ್ದಳು. ಇವಳನ್ನು ಪಡೆಯುವಲ್ಲಿ ಜಮೀನ್ದಾರರಾದ ಗಂಗಪ್ಪ ಮತ್ತು ಸೂಗೆನಗೌಡನಿಗೆ ಪೈಪೋಟಿ ನಡೆಯುತ್ತದೆ. ಇದರಲ್ಲಿ ಮಾಬಿ ಸೂಗನಗೌಡ ವ್ಯಕ್ತಿತ್ವ ಮತ್ತು ಗುಣಕ್ಕೆ ಮಾರುಹೋಗಿ ಸೂಗನಗೌಡನೊಂದಿಗೆ ಇರಲು ಬಯಸುತ್ತಾಳೆ. ಕಾರಣ ಒಂದು ಅಸ್ತಿತ್ವದ ಪ್ರಶ್ನೆ, ಮತ್ತೊಂದು ಒಬ್ಬನಿಗೆ ನಿಷ್ಠಳಾಗಿರಬೇಕೆಂಬ ಆದರ್ಶತೆ ಕಾರಣವಾಗಿದೆ. ಅದಕ್ಕಾಗಿ ಮಾಬಿ ಇತರ ಪಾತ್ರದವರು ಪಡೆಯಲಾಗದಂತಹ 'ಗೌಡಸಾನಿ' ಎಂಬ ಪಟ್ಟವನ್ನು ಪಡೆಯುತ್ತಾಳೆ. ಅವಳು ಕೆಳಸಮುದಾಯದ ನೋವುಗಳನ್ನು ಅರಿತಿದ್ದರಿಂದ ಕೆಳವರ್ಗದವರ ನೋವಿಗೆ ಆಶ್ರಯಳಾಗುತ್ತಾಳೆ. ಸಮಾಜಕ್ಕೆ ಪ್ರಗತಿಪರವಾದ ಸೇವೆ ಮಾಡಿದರೂ ಅಡ್ಡಿ ಆತಂಕಗಳು ಬರುವುದು ಸಹಜವಾಗಿದೆ. ಸಣ್ಣಗೌಡಸಾನಿಯ ಸಮಾಜ ಸೇವೆಯಿಂದ ಪವಾಡ ಪುರುಷಳೆಂಬಂತಹ ವರ್ಣನೆ ಈ ಕಾದಂಬರಿಯಲ್ಲಿ ಕಂಡುಬರುತ್ತದೆ. ಇದರಿಂದ ಸಾಮಾಜಿಕವಾಗಿ ಹಾಗೂ ಕೌಟುಂಬಿಕವಾಗಿ ಕೆಲ ಅಡ್ಡಿ ಆಂತಕಗಳನ್ನು ಅನುಭವಿಸುತ್ತಾಳೆ.

**೩.೨. ಕೊರವ ಸಮುದಾಯ ಸಂಕ್ಷಿಪ್ತ ಪರಿಚಯ**

ಹೈದರಾಬಾದ್ ಕರ್ನಾಟಕದ ಸಾಹಿತ್ಯದಲ್ಲಿ ಕಂಡುಬರುವ ಸಮುದಾಯಗಳಲ್ಲಿ ಕೊರವ ಸಮುದಾಯ ಒಂದಾಗಿದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಇದು ಅತ್ಯಂತ ತಳಸಮುದಾಯವಾಗಿದೆ. ಇಂತಹ ಸಮುದಾಯಗಳನ್ನು ಹತ್ತಿರದಿಂದ ನೋಡಿ, ಅವರ ಜೊತೆಗೆ ಒಡನಾಟ ಹೊಂದಿರುವಂತಹ ಜಂಬಣ್ಣ ಅಮರಚಿಂತರು 'ಕುರುಮಯ್ಯ ಮತ್ತು ಅಂಕುಶದೊಡ್ಡಿ' ಕಾದಂಬರಿಯನ್ನು ರಚಿಸಿದ್ದಾರೆ. ಇದು ಈ ಸಮುದಾಯದ ಸೂಕ್ಷ್ಮ ಸಂವೇದನೆಗಳನ್ನು ತಿಳಿಯಪಡಿಸುತ್ತದೆ. ಅಂಕುಶದೊಡ್ಡಿ ಕೊರವರ ಬದುಕು ತನ್ನದೇ ಆದ ವಿಶಿಷ್ಟತೆಯನ್ನು ಪಡೆದಿರುವಂತಹದ್ದು. ಇದು ಊರ ಅಂಚಿನಲ್ಲಿ ಎಲೆಮರೆಯ ಕಾಯಿಯಂತೆ ಬದುಕುವ ಜನಾಂಗವಾಗಿದೆ. ಇಲ್ಲಿ ತಮ್ಮ ಸಮುದಾಯದ ಹಿರಿಯನಾದ ನಾಯಕನ ನಿರ್ಣಯಕ್ಕೆ ಬದ್ಧವಾಗಿ ನಡೆದುಕೊಳ್ಳುವುದು ಕಂಡುಬರುತ್ತದೆ. ಇಲ್ಲಿ ತಮ್ಮ ಸಮಸ್ಯೆಯನ್ನು ಹಿರಿಯರ ಸಮ್ಮುಖದ ಪಂಚಾಯ್ತಿ ಕೂಡಿಸಿ ನ್ಯಾಯ ಬಗೆಹರಿಸಿಕೊಳ್ಳುವರು. ಇವರ ಪ್ರಮುಖ ವೃತ್ತಿ ಹಂದಿ ಸಾಕಾಣಿಕೆಯಾಗಿದೆ. ಇಲ್ಲಿನ ಜನತೆಯು ಉಳ್ಳವರ ಸೇವೆಯಲ್ಲಿ ನಿರತರಾಗಿರುತ್ತಾರೆ. ಇವರು ಉಪವೃತ್ತಿಯಾಗಿ ಬೇಟೆಯಾಡುವುದು, ಈಚಲ ಮರದಿಂದ ಚಾಪೆ, ಮೊರ, ಬುಟ್ಟಿ, ಸಿಂಬೆ, ಗುಮ್ಮಿ ತಟ್ಟೆ ಮುಂತಾದ ವಸ್ತುಗಳನ್ನು ತಯಾರಿಸುವ ಕಲೆ ಈ ಜಾನಾಂಗದ ಕುಲಕಸುಬಾಗಿ ಬಂದಿರುವಂತಹದ್ದು. ಇಂತಹ ವಸ್ತುಗಳ ತಯಾರಿಕೆಯಲ್ಲಿಯೂ ಅವರ ಜೀವನ ನಿರ್ವಹಣೆಗೂ ಸಾಲದಂತಹ ಸ್ಥಿತಿಯಲ್ಲಿ ಈ ಜನಾಂಗವು ಉಳ್ಳವರ ಅಡಿಯಲ್ಲಿ ತಮ್ಮ ಬದುಕನ್ನು ನಿರ್ವಹಿಸಿಕೊಂಡು ಬಂದಿದ್ದಾರೆ. ಇವರ ದೈವಾರಾಧನೆಯಲ್ಲಿ ಮುಖ್ಯವಾದದ್ದು

'ಬೆತ್ತಲೆಸೇವೆ'. ಆದರೆ ಇದರಿಂದ ಈ ಜನಾಂಗದ ಬದುಕಿಗೆ ಬೇರೆ ರೀತಿಯ ದುಷ್ಪರಿಣಾಮಗಳು ಆಗುತ್ತಿದ್ದವು. ಕಾಮುಕ ಪುರುಷರಿಗೆ ಬೆತ್ತಲೆಸೇವೆ ಮಾಡುವ ಹೆಣ್ಣುಮಕ್ಕಳು ಬಲಿಯಾಗುತ್ತಿದ್ದರು. ಇಂತಹ ಅಮಾನವೀಯವಾದ ದೈವಿಕ ಆರಾಧನೆಯು ಉಳ್ಳವರ ಕುತಂತ್ರವಾಗಿತ್ತು. ಫ್ಯೂಡಲ್ ವ್ಯವಸ್ಥೆ ಹಾಗೂ ಪುರೋಹಿತಶಾಹಿ ವ್ಯವಸ್ಥೆಯೊಳಗೆ ಕೆಳವರ್ಗದ ಬದುಕು ನಿರಂತರವಾಗಿ ಶೋಷಣೆಯನ್ನು ಅನುಭವಿಸುತ್ತ ಬಂದಿದೆ. ಬೆತ್ತಲೆಸೇವೆಯ ಹರಕೆ ಹೊತ್ತ ತಾಯೇರಿ ಬುಡ್ಡಪ್ಪನೊಂದಿಗೆ ಮದುವೆಯಾಗುವ ಇಚ್ಛೆಯನ್ನು ಹೊಂದಿದ್ದಳು. ಕುಟುಂಬದವರ ಒತ್ತಾಯಕ್ಕೆ ಮುದುಕನೊಂದಿಗೆ ಮದುವೆಯಾಗಬೇಕಾದ ಗಂಡಾಂತರದಿಂದ ಪಾರುಮಾಡೆಂದು ದೇವಿಗೆ ಹರಕೆ ಹೊತ್ತ ತಾಯೇರಿಯ ಇಚ್ಛೆ ಈಡೇರುತ್ತದೆ. ಬೆತ್ತಲೆಸೇವೆ ಮಾಡಿ ತನ್ನ ಮನಸ್ಸಿನ ಆಸೆ ಇಡೇರಿಸಿಕೊಂಡು ಬುಡ್ಡಪ್ಪನೊಂದಿಗೆ ಮದುವೆಯಾದದ್ದನ್ನು ಸಹಿಸದ ಕೊರವ ಜನಾಂಗದ ಪುರುಷರ ಕೆಂಗಣ್ಣಿಗೆ ತಾಯೇರಿ ಬಲಿಯಾಗುತ್ತಾಳೆ. ಆಕೆಯ ಮೇಲೆ ಗ್ಯಾನಪ್ಪನು ಅತ್ಯಾಚಾರ ಮಾಡಲು ಬಯಸುತ್ತಾನೆ. ಹರಕೆಯಂತಹ ದೈವಿ ಕಾರ್ಯಗಳು ಇಲ್ಲಿ ಶ್ರದ್ಧೆ ಮತ್ತು ಗೌರವಗಳ ಹೆಸರಿನಲ್ಲಿ ನಡೆದುಕೊಂಡು ಬಂದಿವೆ. ಇಂತಹ ಅಮಾನವೀಯ ಹರಕೆಗಳನ್ನು ದೇವರ ಹೆಸರಿನಲ್ಲಿ ರೂಢಿಸುವ ಕಾಮುಕ ಪುರುಷ ಸಮಾಜದಿಂದ ಈ ಸಮುದಾಯದ ಸ್ತ್ರೀಯ ಬದುಕು ನಿರಂತರವಾಗಿ ಶೋಷಣೆಗೆ ಒಳಗಾಗುತ್ತ ಬಂದಿದೆ.

ಕೊರವ ಸಮುದಾಯದಲ್ಲಿ ಕಂಡುಬರುವ ಇನ್ನೊಂದು ಪದ್ಧತಿಯೆಂದರೆ ತನಗೆ ಸಂಬಂಧಿಸಿದ ಹೆಣ್ಣನ್ನು ಗಂಡನು ಬೇರೆಯವರಿಗೆ ಮಾರಿಕೊಳ್ಳುವಂತಹದ್ದು. ಹೆಂಡತಿಯನ್ನು ಗಂಡ ಯಾರಿಗೆ ಬೇಕಾದರೂ ಮಾರಿಕೊಳ್ಳುವ ಅನಿಷ್ಟ ಪದ್ಧತಿ ಈ ಸಮುದಾಯದಲ್ಲಿ ನೆಲೆಯೂರಿರುತ್ತದೆ. ಇದು ಇವರ ಸಮುದಾಯದಲ್ಲಿ ಹಿಂದಿನಿಂದಲೂ ರೂಢಿಯಲ್ಲಿರುವ ಒಂದು ಅನಿಷ್ಟ ಪದ್ಧತಿಯಾಗಿದೆ. ಕೊರವ ಸಮುದಾಯದ ಈ ರೀತಿಯ ನೀತಿಗಳಿಂದಾಗಿಯೇ ಇಲ್ಲಿನ ಮಹಿಳೆಯರ ಸಂವೇದನೆ ತೀರಾ ಭಿನ್ನವಾಗಿದೆ. ಪುರುಷಪ್ರಧಾನ ವ್ಯವಸ್ಥೆಯಿಂದ ಇಲ್ಲಿನ ಮಹಿಳೆಯರು ತಮ್ಮ ಅಸ್ತಿತ್ವವನ್ನೇ ಕಳೆದುಕೊಂಡು ಜೀವಿಸುವಂತಾಗಿದೆ. ಇಲ್ಲಿ ರೋಗಿಯಾದ ಮಾರಪ್ಪನಿಂದ ಬಿಡುಗಡೆ ಹೊಂದಿದ ಬುಡ್ಡಮ್ಮ ಜಂಬಯ್ಯನೊಂದಿಗೆ ಕೂಡಿಕೊಳ್ಳುತ್ತಾಳೆ. ತನ್ನ ಮಗುವಿಗಾಗಿ ಹಂಬಲಿಸುವ ಬುಡ್ಡಮ್ಮನಿಗೆ ತಾಯ್ತನದ ವೇದನೆ ಮಾರಪ್ಪನಿಗಾಗಲಿ ಜಂಬಯ್ಯನಿಗಾಗಲಿ ತಿಳಿಯುವುದಿಲ್ಲ. ಆರ್ಥಿಕವಾಗಿ ಇಳಿಮುಖವಾದಾಗ ಜಂಬಯ್ಯ ಹೆಂಡತಿಯನ್ನು ಮುದುಕ ಗ್ಯಾನಪ್ಪನಿಗೆ ಮಾರುತ್ತಾನೆ. ಇದರಿಂದ ತೀವ್ರವಾದ ನೋವನ್ನು ಅನುಭವಿಸಿದ ಬುಡ್ಡಮ್ಮ ಮಗು ಸಮೇತ ಬಾವಿಗೆ ಬಿದ್ದು ತನ್ನ ಪ್ರಾಣವನ್ನು ಕಳೆದುಕೊಳ್ಳುತ್ತಾಳೆ. "ಇದ್ದಾಗ ಯಾರ್ದು ತಪ್ಪು ಯಾರ್ದು ಒಪ್ಪು... ಯಾವ ಸೂಳೆಮಗ ಮಾಡಿದ್ರೋ ಇಂತಹ ರಿವಾಜು... ಹೆಂಗಸ್ಸು ಮಾರೋದು ಯಾವ ಮಂದ್ಯಾಗ ಇಲ್ಲ"[7] ಎಂದು ಅಂಕುಶದೊಡ್ಡಿಯ ಯಜಮಾನ ಕುರುಮಯ್ಯ ಚಿಂತಿಸುತ್ತಿದ್ದರು. ಅನಾಹುತವು ಸಂಭವಿಸಿಯಾಗಿತ್ತು. ಸಮುದಾಯಗಳು ತಾವು ರೂಪಿಸಿಕೊಂಡು ಬಂದ ಪದ್ಧತಿಗಳ ಒಳಿತು ಕೆಡುಕುಗಳ ಪರಾಮರ್ಶೆ

ಮಾಡದೆ ಒಪ್ಪಿಕೊಂಡು ಬದುಕು ಕಟ್ಟಿಕೊಂಡಿರುವ ಮೌಢ್ಯತೆಯನ್ನು ಕಾಬಂಂಬರಿಕಾರರು ಇಲ್ಲಿ ಅನಾವರಣಗೊಳಿಸಿದ್ದಾರೆ. ಸಮುದಾಯಗಳ ಮೌಢ್ಯತೆಗಳ ಪರಿವರ್ತನೆಯ ಲಕ್ಷಣಗಳು ಪ್ರಸ್ತುತ ಕಾದಂಬರಿಯಲ್ಲಿ ಕಂಡುಬರುತ್ತವೆಯಾದರೂ ಇಂತಹ ಪದ್ಧತಿಗಳನ್ನು ಆಯಾ ಸಮುದಾಯಗಳ ಮೇಲೆ ಹೇರಿ ತಮ್ಮ ಸ್ವಾರ್ಥ ಉದ್ದೇಶಗಳನ್ನು ಈಡೇರಿಸಿಕೊಳ್ಳುವ ಮೇಲ್ವರ್ಗದ ಶೋಷಣೆಯ ಬಗೆಯನ್ನು ಇಲ್ಲಿ ಬಿಂಬಿಸಲಾಗಿದೆ. ಇಲ್ಲಿ ಉಳ್ಳವರ ಅಧೀನದಿಂದ ಬಿಡುಗಡೆಗೊಂಡು ತಮ್ಮ ಮೂಲವೃತ್ತಿಯಿಂದ ಮುಂದುವರಿದು, ವೃತ್ತಿಯ ಪಲ್ಲಟದಿಂದ ಕೃಷಿಕಾರ್ಯದಲ್ಲಿ ತೊಡಗಿ ತಮ್ಮ ಹೊಟ್ಟೆಪಾಡಿಗೆ ಬೇಕಾದ ಆಹಾರ ಸಂಗ್ರಹಣೆಗೆ ಮುಂದಾದಾಗ ಕೊರವರ ಸಮುದಾಯ ಮೇಲುವರ್ಗದ ಜಮೀನ್ದಾರರ ಕೋಪಕ್ಕೆ ಗುರಿಯಾಗುತ್ತಾರೆ.

ಪ್ರಸ್ತುತ ಕಾದಂಬರಿಯಲ್ಲಿ ಕೊರವ ಸಮುದಾಯವನ್ನು ಪ್ರಕೃತಿಯು ಸಹ ಶೋಷಣೆ ಮಾಡುವ ಬಗೆಯನ್ನು ಚಿತ್ರಿಸಲಾಗಿದೆ. ಅತಿಯಾದ ಮಳೆಯಿಂದ ಕಂಗೆಟ್ಟ ಸಮುದಾಯ ಆಶ್ರಯಕ್ಕಾಗಿ ತಮ್ಮನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಗುಡಿಯಲ್ಲಿ ಆಶ್ರಯ ಪಡೆಯುತ್ತಾರೆ. ಇದು ಪುರೋಹಿತಶಾಹಿ ವ್ಯವಸ್ಥೆ ನಿರ್ಮಿಸಿದ ಜಾತಿವ್ಯವಸ್ಥೆ ನಿಯಮಕ್ಕೆ ವಿರುದ್ಧ ಎಂದು, ಕೀಳು ಜಾತಿಯವರು ಗುಡಿ ಪ್ರವೇಶ ಮಾಡಿರುವುದು ಅಪವಿತ್ರ ಎಂಬುದಕ್ಕೆ ಜಮೀನ್ದಾರರ ಕೋಪಕ್ಕೆ ಗುರಿಯಾಗುತ್ತಾರೆ. ಅಲ್ಲದೇ ಊರಿನಿಂದಲೇ ಬಹಿಷ್ಕಾರ ಪಡೆದು ಹೊರನಡೆಯುತ್ತಾರೆ.

ಅಲ್ಲದೆ ಗೌಡನ ಅನ್ಯಾಯವನ್ನು ವಿರೋಧಿಸಿದ್ದಕ್ಕೆ ಕುಡಿಯುವ ನೀರಿನ ಬಾವಿಯನ್ನು ಕಸಿದುಕೊಂಡರು. ನೀರಿನ ತಾಪತ್ರಯವನ್ನು ಎದುರಿಸಲು ಮತ್ತು ತಮ್ಮ ಸ್ವಾಭಿಮಾನ, ಆತ್ಮವಿಶ್ವಾಸದಿಂದ ತೋಡಿದ ಬಾವಿಯೂ ಅನ್ಯಾಯವಾಗಿ ಗೌಡನ ಪಾಲಾಗುತ್ತದೆ. ಈ ಕೆಳಸಮುದಾಯ ಹೇಗೊ ಬದುಕು ಕಟ್ಟಿಕೊಂಡು ಸ್ವತಂತ್ರವಾಗಿ ಇರುವುದಕ್ಕೆ ಈ ವ್ಯವಸ್ಥೆ ಬಿಡದೆ ಇವರನ್ನು ಕಂಗೆಡಿಸಿ ಶೋಷಣೆಗೆ ಒಳಪಡಿಸುತ್ತದೆ. ಈ ಕಾದಂಬರಿಯ ಹೆಸರೇ ಸೂಚಿಸುವಂತಹ 'ಅಂಕುಶ' ಎಂಬ ರೂಪಕವು ಆನೆಯಷ್ಟು ಬಲಿಷ್ಠವಾದ ಜನಾಂಗವನ್ನು ಇಲ್ಲಿ ಚಿಕ್ಕ ಗಾತ್ರದ ಜಮೀನ್ದಾರಿ ವ್ಯವಸ್ಥೆಯು ಹಿಂಸೆಗೆ ಗುರಿಪಡಿಸಿ ತನ್ನ ಅಡಿಯಾಳಾಗಿ ನಡೆಸಿಕೊಂಡು ಬಂದಿರುವುದನ್ನು ಕಾದಂಬರಿಕಾರರು ಚಿತ್ರಿಸಿರುವುದು ಕಂಡುಬರುತ್ತದೆ.

### ೩.೩. ಲಂಬಾಣಿ ಸಮುದಾಯದ ಸಂಕ್ಷಿಪ್ತ ಪರಿಚಯ

"ಲಂಬಾಣಿ ಜನಾಂಗವು ಬುಡಕಟ್ಟು ಸಮುದಾಯಕ್ಕೆ ಸೇರಿದವರು. ಊರ ಅಂಚಿನಲ್ಲಿ ನಗರದ ಅಂಚಿನಲ್ಲಿ ಪ್ರತ್ಯೇಕವಾಗಿ ತಾಂಡವನ್ನು ಕಟ್ಟಿಕೊಂಡು ಬದುಕುವ ಜನರೇ ಲಂಬಾಣಿಗರು. ಇವರ ಭಾಷೆ, ಸಂಸ್ಕೃತಿ ಮತ್ತು ಸಾಮಾಜಿಕ ಬದುಕು ಇತರ ವ್ಯವಸ್ಥೆಗಿಂತ ಭಿನ್ನವಾಗಿವೆ. ಇವರನ್ನು ಕರ್ನಾಟಕದಲ್ಲಿ ಬೇರೆ ಬೇರೆ ಹೆಸರುಗಳಿಂದ ಗುರುತಿಸಲಾಗುತ್ತದೆ. ಈ ಜನಾಂಗದವರು

ಕರ್ನಾಟಕ, ಆಂಧ್ರಪ್ರದೇಶ ಹಾಗೂ ಮಹಾರಾಷ್ಟ್ರಗಳಲ್ಲಿ ಲಮಾಣಿ, ಲಂಬಾಣಿ, ಲಂಬಾಡಿ, ಲಂಬಾಡಾ, ಲಬಾಸ್, ಲಭಾನಾ, ಲಭಾನಿ ಮುಂತಾದ ಹೆಸರುಗಳಿಂದ ಕರೆಯಲ್ಪಡುತ್ತಾರೆ. ಲಮಾಣಿ ಅಥವಾ ಲಂಬಾಣಿ ಎಂಬ ಪದಗಳು ವ್ಯವಸಾಯ ಸೂಚಕ ಹೆಸರುಗಳಾಗಿವೆ. ಪಶ್ಚಿಮ ಸಮುದ್ರದಿಂದ 'ಲವಣವನ್ನು ತಮ್ಮ ದನಕರುಗಳ ಮೇಲೆ ಹೇರಿಕೊಂಡು ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರ ಕಡೆಗಳಲ್ಲಿ ವ್ಯಾಪಾರವನ್ನು ಕೈಗೊಂಡರು. ಆ ವೃತ್ತಿಯನ್ನೇ ಆಧರಿಸಿ ಈ ಜನರನ್ನು ಲವಣಿಗರು, ಲಮಾಣರು, ಲಭಾನಿಗಳು, ಲಭಾನಿಗರು, ಲಂಬಾಡಿಗರು, ಲಂಬಾಣಿಗರು"[೨] ಎಂಬ ಹೆಸರುಗಳಿಂದ ಕರೆಯತೊಡಗಿದರು.

ಈ ಸಮುದಾಯವನ್ನು 'ಬಂಜಾರ' ಎಂದು ಸಹ ಕರೆಯಲಾಗುತ್ತದೆ. "ಬಂಜಾರ ಅಥವಾ ಬಣಜಾರ ಎಂಬುದು ಇವರು ಮೂಲತಃ ವರ್ಗೀಕರಿಸಿದ್ದಾರೆಂಬುದನ್ನು ಸೂಚಿಸುತ್ತದೆ. ಬಂಜಾರ ಸಂಸ್ಕೃತದ 'ವಾಣಿಜ್ಯ' ಎಂಬ ಶಬ್ದದಿಂದ ಉತ್ಪತ್ತಿಯಾಗಿದೆ. ಪೂರ್ವದಲ್ಲಿ ಇವರು ವ್ಯಾಪಾರವನ್ನು ಕೈಗೊಂಡು ದೇಶ–ವಿದೇಶದಲ್ಲಿ ಸಂಚರಿಸುತ್ತಿದ್ದುದರಿಂದ ಇವರನ್ನು ಬಂಜಾರ, ಬಣಜಾರ"[೩] ಎಂಬ ಹೆಸರುಗಳಿಂದ ಕರೆದರು.

ಲಂಬಾಣಿ ಅಥವಾ ಬಂಜಾರ ಸಮುದಾಯದ ಸಂವೇದನೆ ಹೈದರಾಬಾದ್–ಕರ್ನಾಟಕದ ಕಾದಂಬರಿ ಸಾಹಿತ್ಯದಲ್ಲಿ ವಿಶಿಷ್ಟವಾಗಿ ರಚನೆಯಾಗಿರುವುದು ಹೆಮ್ಮೆಯ ಸಂಗತಿಯಾಗಿದೆ. 'ಹವನ'(ಮಲ್ಲಿಕಾರ್ಜುನ ಹಿರೇಮಠ) ಕಾದಂಬರಿಯಲ್ಲಿ ಈ ಸಮುದಾಯದ ಅನೇಕ ಆಚರಣೆಗಳು ತಿಳಿದುಬರುತ್ತವೆ. ಈ ಸಮುದಾಯವು ಅನೇಕ ಸಾಂಸ್ಕೃತಿಕ ಚಹರೆಗಳನ್ನು ತಮ್ಮ ನೆಲೆಯಲ್ಲಿ ರೂಪಿಸಿಕೊಂಡಿದ್ದರೆ. ಅಂತಹವುಗಳಲ್ಲಿ 'ತೀಜಹಬ್ಬ' ಎಂಬುದು ಪ್ರಮುಖವಾದ ಹಬ್ಬವಾಗಿದೆ. ಈ ಸಮುದಾಯದ ಮದುವೆಯಾಗದ ಯುವತಿಯರು ಮಾಡುವಂತಹ ಹಬ್ಬ. ಈ ಹಬ್ಬದಲ್ಲಿ ಗೋಧಿ ಸಸಿಗಳನ್ನು ಹುಡುಗಿಯರು ೯ ದಿನ ಉಪವಾಸ ವ್ರತವಿದ್ದು ತಯಾರು ಮಾಡುತ್ತಾರೆ. ಅಲ್ಲದೆ ಸಪ್ಪೆ ಊಟ ತಿಂದು ಉಪವಾಸ ಬಿಡುತ್ತಾರೆ. ಈ ವ್ರತ ಮಾಡುವ ಯಾವ ಹುಡುಗಿಯ ಬುಟ್ಟಿಯಲ್ಲಿ 'ಸಸಿ' ಚೆನ್ನಾಗಿ ಬೆಳೆದಿದೆಯೋ ಅವಳು 'ಶೀಲವಂತೆ' ಎಂಬ ನಂಬಿಕೆ. ಇವರ ಸಮುದಾಯ ಮೂಲಪುರುಷ ಪುಣ್ಯಕತೆಗಳು, ಧಾರ್ಮಿಕ ವಿಧಿವಿಧಾನಗಳನ್ನು ಕೂಡ ಆಚರಿಸುತ್ತಾರೆ. ದೇವರಿಗೆ 'ಪ್ರಾಣಿಬಲಿ' ಕೊಡುತ್ತಾರೆ. ತಮ್ಮ ನೆಮ್ಮದಿ ಮತ್ತು ದೇವಿಯ ತಾಮಸವನ್ನು ಶಾಂತಿ ಮಾಡುವ ಸಲುವಾಗಿ ಆಚರಿಸುತ್ತಾರೆ. ಇದು ಅವರ ಸಾಂಪ್ರದಾಯಿಕ ನಂಬಿಕೆಯಾಗಿದೆ.

ಇವರ ಜನಾಂಗದಲ್ಲಿ ಮದುವೆಯು ಒಂದು ಪ್ರಮುಖವಾದ ವಿಧಾನವಾಗಿದೆ. ಅಲೆಮಾರಿಗಳಿಂದ ರಾತ್ರಿ ಬೆಳದಿಂಗಳಲ್ಲಿ ಹಾಡುತ್ತಾ ಕುಣಿಯುತ್ತಾ ಮದುವೆಯ ಸಂಪ್ರದಾಯವನ್ನು ಪಾಲಿಸುತ್ತಾರೆ. ಅಂತಹ ಕಾರ್ಯಗಳಾದ ಸಂಗಾಯಿಕಾರ್ಯ, ಮವಾಯಿ, ತಿಲಕ ಹಚ್ಚುವುದು, ಸುರಗಿ ನೀರಾಕುವುದು, ಹಿರಿಯರ ಆತ್ಮಶಾಂತಿ ಹಾಗೂ ಗೋಟ್‌ಬಲಿ ಹೀಗೆ ಅನೇಕ ಆಚರಣೆಗಳನ್ನು

ಮಾಡಿ ಗಂಡುಹೆಣ್ಣಿನ ಸಂಬಧ ಮದುವೆ ಎಂಬ ಸಂಕೇತದ ಮೂಲಕ ದಾಂಪತ್ಯಕ್ಕೆ ಪ್ರವೇಶಿಸುವುದನ್ನು ಇಲ್ಲಿ ಅನಾವರಣಗೊಂಡಿದೆ. ಈ ಸಮುದಾಯಗಳು ಸಾಂಸ್ಕೃತಿಕ ವೀರರನ್ನು ತಮ್ಮ ನಾಯಕನನ್ನಾಗಿ ಮಾಡಿಕೊಂಡಿರುತ್ತಾರೆ. ಅವರ ಸಾಹಸ, ತತ್ವ ಆದರ್ಶಗಳನ್ನು ತಮ್ಮ ಜೀವನದಲ್ಲಿ ಅನುಸರಿಸಿಕೊಂಡು ಹೋಗುತ್ತಾರೆ. ಇವರ ಮೂಲಕ ತಮ್ಮ ಸಾಂಸ್ಕೃತಿಕ ಜೀವನ ಮೂಲ ನೆಲೆಯನ್ನು ಗುರುತಿಸಿಕೊಳ್ಳಲು ಸಹಾಯಕರಾಗುತ್ತಾರೆ.

ಇವರಲ್ಲಿ ಶಿಕ್ಷಣ ಕೊರತೆ ಎದ್ದು ಕಾಣುತ್ತದೆ. ಹಿಂದಿನಿಂದಲೂ ಅಲೆಮಾರಿಗಳಾಗಿ ಜೀವನ ಸಾಗಿಸಿಕೊಂಡು ಬಂದ ಈ ಸಮುದಾಯವು ಶ್ರಮಜೀವನದಿಂದ ಬದುಕಿದವರಾಗಿದ್ದಾರೆ. ಕಾದಂಬರಿಕಾರರು ಬಂಡಾಯದ ತಾತ್ವಿಕ ನೆಲೆಗಟ್ಟಿನಲ್ಲಿ ಈ ಸಮುದಾಯದ ಚಿತ್ರಣವನ್ನು ಅನಾವರಣಗೊಳಿಸಿದ್ದಾರೆ. ಶಿಕ್ಷಣ ಪ್ರಸಾರ ತಮ್ಮ ಸಮುದಾಯಕ್ಕೆ ಅವಶ್ಯಕ ಎಂಬ ತಿಳುವಳಿಕೆಯಿಂದ ಶಿಕ್ಷಣಕ್ಕೆ ಪ್ರೋತ್ಸಾಹ ಕೊಡುವ ಮೂಲಕ ಇವರನ್ನು ಪ್ರಗತಿಯತ್ತ ಮುಖಮಾಡಲಾಗಿದೆ. ಶಿಕ್ಷಣದಿಂದ ಪ್ರಾರಂಭವಾದ ಈ ಸಮುದಾಯದ ಹೋರಾಟವು ಸಂಘಟನೆಗೊಂಡು ಊರ ಗೋಮಾಳ ಪಡೆದು ಕೃಷಿಯಲ್ಲಿ ತಲ್ಲೀನರಾಗಬೇಕು ಎನ್ನುವ ಇವರ ಪ್ರಗತಿಪರತೆಯ ವಿಚಾರಗಳು ಮೇಲುವರ್ಗ ದವರಿಗೆ ಸಹಿಸದ ಸಂಗತಿಯಾಗಿ ಅವರ ಕೆಂಗಣ್ಣಿಗೆ ಗುರಿಯಾಗುತ್ತಾರೆ. ಉತ್ತರ ಕರ್ನಾಟಕದ ಹುನಗುಂದ ಪ್ರದೇಶದ ಲಮಾಣಿ ಸಮುದಾಯದ ರೀತಿ–ನೀತಿ, ಆಚರಣೆ, ಸಂಭ್ರಮ, ಸಾರಾಯಿ ಮಾರುವ ದಂಧೆಯ ವಿಷಯವೆಲ್ಲ ಕಾದಂಬರಿಯಲ್ಲಿ ತಿಳಿದುಬರುತ್ತವೆ. ಪ್ರಸ್ತುತ ಕಾದಂಬರಿಯು ಆಧುನಿಕತೆ ಮತ್ತು ಪರಂಪರೆಯನ್ನು ಮುಖಾಮುಖಿಯಾಗಿ ನಿಲ್ಲಿಸುತ್ತದೆ. ಅಲಕ್ಷಿತ ಸಮುದಾಯಗಳು ಜಮೀನ್ದಾರಿ ವ್ಯವಸ್ಥೆಯಿಂದ ಶೋಷಣೆಗೆ ಒಳಗಾಗಿರುವ ಬಗೆಯನ್ನು ಕಟ್ಟಿಕೊಡುವುದರ ಜೊತೆಯಲ್ಲಿ, ಈ ಸಮುದಾಯದ ಸಾಂಸ್ಕೃತಿಕ ಚಹರೆಗಳನ್ನು ಈ ಕಾದಂಬರಿಯು ಅನಾವರಣಗೊಳಿಸುತ್ತದೆ.

**ಕೊನೆ ಟಿಪ್ಪಣಿ**

೧. ಜಂಬಣ್ಣ ಅಮರಚಿಂತ., ಕುಮಯ್ಯ ಮತ್ತು ಅಂಕುಶದೊಡ್ಡಿ, ಪು.ಸಂ.೮೬

೨. ಪಿ.ಕೆ ಖಂಡೋಬ., ಪು.ಸಂ.೧೦–೧೧

೩. ಅದೇ.ಪು.೯–೧೦

ಅಧ್ಯಾಯ ನಾಲ್ಕು

# ಹೈದ್ರಾಬಾದ್ ಕರ್ನಾಟಕ ಪ್ರಾಂತ್ಯದ ಆಯ್ದ ಕಾದಂಬರಿಗಳ ವಿಶ್ಲೇಷಣೆ

೪.೧. ಸಣ್ಣಗೌಡಸಾನಿ: ಶಾಂತರಸ

೪.೨. ಕುರಮಯ್ಯ ಮತ್ತು ಅಂಕುಶದೊಡ್ಡಿ: ಜಂಬಣ್ಣ ಅಮರಚಿಂತ

೪.೩. ಹವನ: ಮಲ್ಲಿಕಾರ್ಜುನ ಹಿರೇಮಠ

ಅಧ್ಯಾಯ ನಾಲ್ಕು

# ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಆಯ್ದ ಕಾದಂಬರಿಗಳ ವಿಶ್ಲೇಷಣೆ

## ೪.೧. ಸಣ್ಣಗೌಡಸಾನಿ

### ಶಾಂತರಸರ ಸಂಕ್ಷಿಪ್ತ ಪರಿಚಯ

ಹೈದರಾಬಾದ್ ಕರ್ನಾಟಕದ ಹಿರಿಯ ತಲೆಮಾರಿನ ಲೇಖಕರಲ್ಲಿ ಶಾಂತರಸರು ಒಬ್ಬರಾಗಿದ್ದಾರೆ. ಇವರು ಕವಿಯಾಗಿ, ಕಥೆಗಾರರಾಗಿ, ಸಂಶೋಧಕರಾಗಿ, ಪತ್ರಕರ್ತರಾಗಿ,- ಪ್ರಯೋಗಶೀಲ ಚಿಂತಕರಾಗಿ ಗಮನಾರ್ಹ ಕಾರ್ಯವನ್ನು ಮಾಡಿದವರು. ಹುಟ್ಟಿದ ನೆಲದಲ್ಲಿಯೇ ಗಟ್ಟಿಯಾಗಿ ನಿಂತು ಆ ನೆಲದ ಸಂಸ್ಕೃತಿ, ಸಾಹಿತ್ಯ ಕಲೆಯನ್ನು ಎತ್ತಿಹಿಡಿದವರು. ಈ ಪ್ರದೇಶದ ಸಮೃದ್ಧ ಸಾಹಿತ್ಯಕ್ಕಾಗಿ ಶ್ರಮಿಸಿದವರು. ಇವರು ಅನ್ಯಾಯ, ಪ್ರತಿರೋಧ, ಸಾಮಾಜಿಕ ಹೋರಾಟ, ಸಾಹಿತ್ಯ ರಚನೆಗೆ ತೊಡಗಿಸಿಕೊಂಡ ಮಹತ್ವಪೂರ್ಣ ಲೇಖಕರಾಗಿದ್ದಾರೆ.

ಇವರು ರಾಯಚೂರು ಜಿಲ್ಲೆಯ ಹೆಂಬೆರಾಳ ಎಂಬ ಗ್ರಾಮದ ಬಡ ಜಂಗಮರ ಮನೆತನದಲ್ಲಿ ೧೯೨೪ ಏಪ್ರಿಲ್ ೪ರಂದು ತಂದೆ ಚನ್ನಬಸಯ್ಯ, ತಾಯಿ ಸಿದ್ಧಲಿಂಗಮ್ಮನವರ ಮಡಿಲಲ್ಲಿ ಜನಿಸಿದರು. ಇವರ ನಿಜನಾಮ 'ಶಾಂತಯ್ಯ' ಆದರೆ ಶಾಂತರಸರೆಂಬ ಕಾವ್ಯನಾಮದಿಂದ ಗುರುತಿಸಿಕೊಂಡಿದ್ದಾರೆ. ಚಿಕ್ಕಂದಿನಲ್ಲೇ ತಾಯಿ ಕಳೆದುಕೊಂಡು ಅಕ್ಕ, ಅಜ್ಜಿಯ ಪ್ರೀತಿ, ವಾತ್ಸಲ್ಯದಲ್ಲಿ ಬೆಳೆದವರು. ಮನೆಯಲ್ಲಿ ಪ್ರತಿನಿತ್ಯ ವೇದಾಂತದ ಚರ್ಚೆ, ಅನುಭಾವದ ಗೋಷ್ಠಿ, ಹಾಡುಗಳು ಮತ್ತು ಮಹಾನ್ ಕೃತಿ ಓದಿ ಅರ್ಥೈಸುವುದು ಇವುಗಳ ಪ್ರಭಾವದ ವಾತಾವರಣ ಉತ್ತಮ ಪ್ರತಿಭೆಯಾಗಿ ಬೆಳೆಯಲು ಹಾದಿಯಾಗಿದೆ.

ಇವರ ತಂದೆ ಜಂಗಮರಾಗಿದ್ದರಿಂದ ಧಾರ್ಮಿಕ ವಿಧಿವಿಧಾನ, ಪಂಚಾಂಗ ಹೇಳುವುದು, ಅಂತ್ರ ಕಟ್ಟುವುದನ್ನು ಇವರು ಪ್ರಶ್ನಿಸಿದರು. ಜಂಗಮರಾದ ಕಾರಣಕ್ಕೆ ಹಿರಿಯರು-ಕಿರಿಯರ ಕಾಲಿಗೆ ನಮಸ್ಕರಿಸುವುದನ್ನು ವಿರೋಧಿಸಿದರು. ಶಿಕ್ಷಣ ಪಡೆಯುವ ಸಂದರ್ಭದಲ್ಲಿಯೇ 'ನಿಜಾಮರು ಸರ್ವಶ್ರೇಷ್ಠ' ಎಂಬ ಗೀತೆ ಹಾಡದೆ ಮೌನವಾಗಿ ನಿಲ್ಲುವುದು, ಮುಸ್ಲಿಂ ಶಿಕ್ಷಕರ ತಾರತಮ್ಯಕ್ಕೆ ಪ್ರತಿರೋಧ ಒಡ್ಡಿದ್ದರು.

ಇವರು ಬಡವರಾದ ಕಾರಣ ಶಿಕ್ಷಣ ಪಡೆಯುವುದಕ್ಕಾಗಿ ಅನೇಕ ಕಡೆಗಳಲ್ಲಿ ಅಲೆದರು ಮತ್ತು ಮನೆ-ಮನೆಯಿಂದ ಹಿಟ್ಟು ಭಿಕ್ಷೆ ಬೇಡಿ ಜೀವನ ಸಾಗಿಸಿದವರು. ಆದರೆ ಸರ್ಕಾರಿ ಶಾಲೆಯಲ್ಲಿ ಕಲಿಯದವರಿಗೆ ಸರಕಾರಿ ನೌಕರಿ ದೊರೆಯದ ಕಾರಣ ಕಲಬುರ್ಗಿಯ 'ಅಸಫ್‌ಗಂಜ್' ಶಾಲೆಗೆ ಪ್ರವೇಶ ಪಡೆದರು. ಆ ಸಂಧರ್ಭದಲ್ಲಿ ನಡೆದಂತಹ ವಂದೇಮಾತರಂ ಚಳವಳಿಗೆ ತೊಡಗಿದ ಕಾರಣ ಶಾಲೆಯಿಂದ ಹೊರಬಂದರು. ರಾಯಚೂರು ಅರ್ಮ್‌ದ್‌ದ್ ಶಾಲೆಯಲ್ಲಿ ಪ್ರವೇಶ ಪಡೆದರು. ಅಲ್ಲಿ ಸೂಗವೀರ ಪಂಡಿತರ ಮಾರ್ಗದರ್ಶನ ಪಡೆದರು. ಅಲ್ಲಿಯೂ ಸಹ ಮುಸ್ಲಿಂ ಶಿಕ್ಷಕರ ತಾರತಮ್ಯ ಪ್ರಶ್ನಿಸಿದ ಕಾರಣಕ್ಕೆ ಹೊರಬಿದ್ದರು. ನಂತರ ರಾಜಸ್ತಾನದ ಮಾರವಾಡಿ ಹೈಸ್ಕೂಲ್‌ನಲ್ಲಿ ೧೯೪೪ ಮೆಟ್ರಿಕ್ಯುಲೇಶನ್ ಪಡೆದರು ಮತ್ತು ಪ್ರಾಥಮಿಕ ಶಿಕ್ಷಕರಾಗಿ ವೃತ್ತಿಜೀವನ ಪ್ರಾರಂಭಿಸಿದರು. ದೂರಶಿಕ್ಷಣದ ಮೂಲಕ ಬಿ.ಎ., ಬಿ.ಎಡ್., ಎಂ.ಎ. ಪದವಿ ಪಡೆದರು. ಶಿಕ್ಷಕ, ಕನ್ನಡ ಪ್ರಾಧ್ಯಾಪಕ, ಪ್ರಿನ್ಸಿಪಾಲರಾಗಿ, ೧೯೮೧ ಏಪ್ರಿಲ್ ೩೦ರಂದು ನಿವೃತ್ತಿ ಹೊಂದಿದರು. ಇವರು ದಕ್ಷ ಆಡಳಿತಗಾರರಾಗಿದ್ದರು. ಪ್ರತಿಭಾವಂತ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಿ ಬೆಳೆಸಿದರು. ಆ ಅವಕಾಶ ಪಡೆದ ಅನೇಕ ವಿದ್ಯಾರ್ಥಿಗಳು, ಸಾಹಿತ್ಯ, ಸಂಗೀತ, ಕಲೆಗಾರರಾಗಿ, ರಾಷ್ಟ್ರೀಯ, ಅಂತಾರರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಿಕೊಂಡಿದ್ದಾರೆ.

ಇವರು ಜೀವನದುದ್ದಕ್ಕೂ ಸಂಘಟನೆ, ಸಾಹಿತ್ಯ, ಸಂಸ್ಕೃತಿಯ ಬೆಳವಣಿಗೆಗಾಗಿ ಶ್ರಮಿಸಿದವರು. ಪ್ರತಿಯೊಂದು ಸಾಹಿತ್ಯ ಚಟುವಟಿಕೆಗಳಲ್ಲಿ ಯುವಶಕ್ತಿ ಮತ್ತು ಸಂಗಡಿಗರನ್ನು ಕ್ರೋಡೀಕರಿಸಿ ಕ್ರಿಯಾಶೀಲತೆಯಿಂದ ಕಾರ್ಯ ಮಾಡಿದವರು. ಸ್ವಾಭಿಮಾನಿಯಾಗಿದ್ದರಿಂದ ತನ್ನ ಪ್ರದೇಶಕ್ಕೆ ಆಗುವ ಅನ್ಯಾಯ, ತಾರತಮ್ಯದ ವಿರುದ್ಧ ಹೋರಾಡಿದರು. ಇಲ್ಲಿ ಸಾಹಿತ್ಯ, ಭಾಷೆ, ನೆಲಗಳ ಮೇಲಿನ ಸರಕಾರದ ಮಲತಾಯಿ ಧೋರಣೆ ವಿರುದ್ಧ ಹೋರಾಡಿದರು.

ಸಾಹಿತ್ಯ, ಸಂಸ್ಕೃತಿ ಬೆಳೆಸುವ ಸಲುವಾಗಿ ಮದುವೆ, ಪುರಾಣ, ಪುಣ್ಯ ತಿಥಿಗಳು, ಜಯಂತಿ, ಹಬ್ಬ ಆಚರಣೆಗಳನ್ನು ಸಾಹಿತ್ಯ ಸಂಸ್ಕೃತಿ, ಉತ್ಸವಗಳಾಗಿ ಆಚರಿಸಿದರು. ಮತ್ತು ಶ್ರೀಮಂತರ ಮನವೊಲಿಸಿ ಅವರ ಮದುವೆ ಸವಿನೆನಪಿಗೆ ಪುಸ್ತಕ ಬಿಡುಗಡೆ ಮಾಡಿಸಿದರು. ಈ ಪ್ರದೇಶದ ಮಠಮಾನ್ಯಗಳಲ್ಲಿ ಪುರಾಣ ಪ್ರವಚನ ಸಂಯೋಜನೆ ಮಾಡಿ ವಿಚಾರ ಸಾಹಿತ್ಯ ಜನಸಾಮಾನ್ಯರಲ್ಲಿ ಬಿತ್ತಿದರು. ಅಲ್ಲದೆ ಬಸವ ಜಯಂತಿ ಆಚರಿಸುವ ಮೂಲಕ ಅಸಮಾನತೆ, ಜಾತೀಯತೆ, ಕಂದಾಚಾರಗಳ ವಿರುದ್ಧ ಸಾಂಸ್ಕೃತಿಕ ಸಂಘರ್ಷ ಹೂಡಿದರು. ಇದರಿಂದ ಸನಾತನವಾದಿಗಳಿಂದ, ಜೀವಬೆದರಿಕೆ ಮತ್ತು ಕುಲದಿಂದ ಹೊರಬೀಳುವ ಸಂದಿಗ್ಧ ಪರಿಸ್ಥಿತಿ ಎದುರಿಸಿದರು. ಅಲ್ಲದೇ ಪ್ರಾಥಮಿಕ ಶಾಲೆಯಲ್ಲಿ ದಲಿತ ವಿದ್ಯಾರ್ಥಿನಿಯಿಂದ 'ಪ್ರತಿಕ' ಪತ್ರಿಕೆ ಆರಂಭಿಸಿದರು. ಈ ಪ್ರದೇಶದ ಕವಿಗಳನ್ನು ನಿರ್ಲಕ್ಷಿಸಿ ಹೊಸ ಅಕ್ಷರ ಕಾವ್ಯ, ಹೊಸ ಜನಾಂಗ ಕವಿಯ ಗ್ರಂಥಗಳನ್ನು ಪ್ರಕಟಿಸಿದರು. ಈ ಪ್ರದೇಶದಲ್ಲಿಯೂ ಕವಿಗಳಿದ್ದಾರೆ ಎಂದು ಗುರುತಿಸುವ ಸಲುವಾಗಿ 'ಚೆನ್ನ ಹಿಂದಿನ ಬೆಳಕು' ಸಂಕಲನ ಪ್ರಕಟಿಸಿ ಎಚ್ಚರಿಸಿದರು.

ಇವರು ನಾಗರಿಕ ವೇದಿಕೆ ಕಟ್ಟದವರು. ಸಾಮಾಜಿಕ ಸಮಸ್ಯೆ ಎತ್ತಿಕೊಂಡು ಬೀದಿಗೆ ಇಳಿದವರು. ಕನ್ನಡ ಶಕ್ತಿಕೇಂದ್ರ, ರಾಜ್ಯ ಘಟಕ ಉಪಾಧ್ಯಕ್ಷರಾಗಿ ಸರಕಾರದ ವಿರುದ್ಧ ಚಳುವಳಿ ಮಾಡಿ ಜೈಲಿಗೆ ಹೋಗಿ ಬಂದವರು. ಕುಷ್ಟಗಿ ಶರಣಮ್ಮ ಕೊಲೆ ಪ್ರಕರಣಕ್ಕಾಗಿ ಹೋರಾಡಿದರು. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಮಹತ್ವ ಯೋಜನೆಗಳನ್ನು ರೂಪಿಸಿದರು. ತತ್ವಪದಗಳ ಸಂಕಲನ, ಶರಣವಚನಗಳು, ಹಿಂದಿ ಅನುವಾದ, ಹೈದರಾಬಾದ್ ಕರ್ನಾಟಕದಲ್ಲಿ ಕನ್ನಡ ಕಟ್ಟದವರು. ಕೋಮುಸೌಹಾರ್ದ ಹೀಗೆ ಅನೇಕ ಯೋಜನೆ ರೂಪಿಸಿದ ಲೇಖಕರಾಗಿದ್ದಾರೆ.

ಶಾಂತರಸರು ಉತ್ತಮ ಸಾಹಿತ್ಯಲೋಕವನ್ನು ಸೃಷ್ಟಿಸಿಕೊಂಡರು. ವಿಶಿಷ್ಟ ದೃಷ್ಟಿಕೋನದಿಂದ ಸಮಾಜವನ್ನು ಅರ್ಥೈಸಿಕೊಂಡು ಹೊಸಚೇತನ, ಚಿಂತನಪರ ಕಾಳಜಿಯುಳ್ಳ ಚಳುವಳಿ ಹುಟ್ಟುಹಾಕಿದರು. "ಕಲೆಗಾಗಿ ಕಲೆ, ಸಾಹಿತ್ಯಕ್ಕಾಗಿ ಸಾಹಿತ್ಯ ಎಂಬುದನ್ನು ನಿರಾಕರಿಸಿ ಬದುಕಿಗಾಗಿ ಕಲೆ, ಸಮಾಜಕ್ಕಾಗಿ ಸಾಹಿತ್ಯ"[೧] ಎಂದು ನಂಬಿ ಬಾಳಿದವರು. ಕವಿ, ಕಥೆಗಾರ, ಸಂಶೋಧಕ, ಗಜಲ್ ರಚನಕಾರನಾಗಿ ರಾಯಚೂರಿನಲ್ಲಿ ಸಾಹಿತ್ಯ ವಾತಾವರಣ ನಿರ್ಮಾಣ ಮಾಡಿದರು. ಭುವನೈಕ್ಯ ನಾಯಕೀ ಶತಕ, ಬಂಡಾಯ ವಚನಗಳು, ರಸಿಕಚಕ್ರ ಹರಿಹರದೇವ, ಮುಂತಾದವುಗಳನ್ನು ಸಂಪಾದಿಸಿದರು. ೧೯೪೨ರಲ್ಲಿ ಬರವಣಿಗೆ ಪ್ರಾರಂಭಿಸಿದರು. ಆದರೆ ೧೯೬೧ರವರೆಗೆ ಸ್ವಂತ ಸೃಜನಶೀಲ ಕೃತಿಯನ್ನು ಪ್ರಕಟಿಸಲಿಲ್ಲ. ನಂತರ ೧೯೬೧ರಲ್ಲಿ ಸತ್ಯ-ಸ್ನೇಹ ಗೀತನಾಟಕ ಇವರ ಪ್ರಥಮ ಕೃತಿಯಾಗಿದೆ. ಈ ಪ್ರದೇಶದ ಕವಿಗಳ ಸಂಕಲನವಾದ 'ಮುಸುಕುತೆರ' ಸಂಗ್ರಹ ಪ್ರಕಟಿಸಿದರು. ಕೂಡಲೂರು ಬಸವಣ್ಣನ ಸ್ವರವಚನ, ಅನುಭವಿಗಳ ತತ್ವಪದ ಸಾಹಿತ್ಯ ಪ್ರಕಟಿಸಿದರು. ಈ ಭಾಗದ ಪ್ರಕಟಣೆ ಸಮಸ್ಯೆ ಎದುರಿಸುವ ಕಾರಣ ಮುಸುಕುತೆರ, ಕಲ್ಯಾಣದೀಪ, ಮಲ್ಲಿಗೆ ಮಾಲೆ, ಜೆನ್ನ ಹಿಂದಿನ ಬೆಳಕು ಗ್ರಂಥಗಳನ್ನು ಹೊರತಂದರು. 'ಪ್ರತಿಕ'ವೆಂಬ ತ್ರೈಮಾಸಿಕ ಪತ್ರಿಕೆ ಆರಂಭಿಸಿದರು.

ಇವರು ಉತ್ತಮ ಕಥನಕಾರರಲ್ಲದೆ ಪ್ರೇಮ ಕವನವನ್ನು ಸಹ ಬರೆದಿದ್ದಾರೆ. ಮಾನಸಗಳ್ಳಿ, 'ಬಯಲು ಸೀಮೆಯ ಬಿಸಿಲು' ಕವನ ಸಂಕಲವನ್ನು ಪ್ರಕಟಿಸಿದರು ಮತ್ತು ಉರ್ದು ಭಾಷೆಯಿಂದ ಅನುವಾದವನ್ನು ಸಹ ಮಾಡಿದ್ದಾರೆ. ಇವರ ಸಾಹಿತ್ಯದ ಕಥೆ ಕಾದಂಬರಿಗಳಲ್ಲಿ ವಾಸ್ತವದ ಬದುಕನ್ನು ಚಿತ್ರೀಕರಿಸಿರುವುದು ಕಾಣುತ್ತದೆ. ಪ್ರಾದೇಶಿಕ ಭಾಷೆಯನ್ನೇ ಬಳಸಿ ಗ್ರಾಮೀಣ ಬದುಕನು, ನಿರ್ಲಿಪ್ತತೆಯಿಂದ ವಾಸ್ತವ ಬದುಕನ್ನು ಕಟ್ಟಿಕೊಟ್ಟಿದ್ದರು. ಫ್ಯೂಡಲ್ ವ್ಯವಸ್ಥೆ ಕಾಮ, ಲೈಂಗಿಕತೆ, ಸಾಂಸ್ಕೃತಿಕ ಅಧಃಪತನ ಇನ್ನೂ ಅನೇಕ ಕ್ರೋಡಿಕರಿಸಿ ಸಾಹಿತ್ಯಲೋಕದಲ್ಲಿ ಕೃಷಿಗೈದವರು. ಸತ್ಯ-ಸ್ನೇಹ, ನಂಜು ನೊರೆವಾಲು, ಮರೆಯಾದ ಮರೆಮ್ಮ ನಾಟಕಗಳನ್ನು ರಚಿಸಿದ್ದಾರೆ. ಹೀಗೆ ಸಾಹಿತ್ಯಕ್ಷೇತ್ರಗಳಲ್ಲಿ ಕೃಷಿಗೈದಿದ್ದಕ್ಕಾಗಿ ಇವರಿಗೆ ಸನ್ಮಾನ ಪ್ರಶಸ್ತಿಗಳು ಲಭಿಸಿವೆ. ಕರ್ನಾಟಕ ಅಕಾಡೆಮಿಯ 'ಫೆಲೋಷಿಪ್' ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ, ೧೯೯೨ರಲ್ಲಿ ರಾಜ್ಯೋತ್ಸವ

ಪ್ರಶಸ್ತಿಯನ್ನು ಪಡೆದಿದ್ದಾರೆ. ಆದರೆ ಅದನ್ನು ತಿರಸ್ಕರಿಸಿದ ಮಹನ್ ಲೇಖಕರು ಇವರಾಗಿದ್ದಾರೆ. ಇವರ 'ಸಣ್ಣಗೌಡಸಾನಿ' ಕಾದಂಬರಿಯನ್ನು ಅಧ್ಯಯನಕ್ಕೆ ಒಳಪಡಿಸಿ ಇವರ ಚಿಂತನ-ಮಂಥನ ಅರಿಯುವ ಆಶಯವನ್ನು ಹೊಂದಿದೆ.

**ಸಣ್ಣಗೌಡಸಾನಿ ಕಾದಂಬರಿಯ ವಿಶ್ಲೇಷಣೆ**

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಹೈದರಾಬಾದ್ ಕರ್ನಾಟಕವು ಒಂದಾಗಿದ್ದು, ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ. ಅದು ತನ್ನದೆಯಾದ ಸಾಹಿತ್ಯ ಪರಂಪರೆಯನ್ನು ಕಟ್ಟಿಕೊಂಡಿದೆ. ಇಡೀ ಕನ್ನಡ ಸಾಹಿತ್ಯಕ್ಕೆ ಮೂಲಗ್ರಂಥ, ಮಾರ್ಗಕೃತಿಯಾದ, 'ಕವಿರಾಜಮಾರ್ಗ'ದ ಮೂಲಸ್ಥಾನ ಈ ಪ್ರದೇಶವಾಗಿದೆ. ಇಲ್ಲಿ ಕವಿರಾಜಮಾರ್ಗ ಕೃತಿಯಿಂದ ಇಡಿದು ತತ್ವಪದ ಸಾಹಿತ್ಯದವರೆಗೆ ತನ್ನದೇಯಾದ ಸಾಹಿತ್ಯ ಸ್ವರೂಪದ ನೆಲೆಯನ್ನು ಬೆಳೆಸಿಕೊಂಡು ಬಂದಿದೆ. ಆಧುನಿಕ ಕನ್ನಡ ಸಾಹಿತ್ಯದ ನವೋದಯ, ಪ್ರಗತಿಶೀಲ, ನವ್ಯ ಸಾಹಿತ್ಯ ಪ್ರಕಾರಗಳಲ್ಲಿ ರಾಷ್ಟ್ರವಾದದ ಪರಿಕಲ್ಪನೆ, ಆಧ್ಯಾತ್ಮಿಕತೆ, ಪ್ರಕೃತಿ ಸೌಂದರ್ಯ, ವರ್ಣನೆ, ಸೃಜನಶೀಲತೆ, ರಂಜನೀಯತೆಗಳು ಬಳಸಿ ಕಾವ್ಯ ರಚನೆಗೊಂಡು ವಿಶಿಷ್ಟ ಸ್ಥಾನ ಗಳಿಸುವುದರ ಜೊತೆಗೆ ಸಹೃದಯ ಮನಸ್ಸುಗಳನ್ನು ಗೆದ್ದವು. ಆದರೆ ಇಂತಹ ಅವಕಾಶ ಹೈದರಾಬಾದ್ ಕರ್ನಾಟಕದ ಸಾಹಿತ್ಯ ಲೇಖಕರಿಗೆ ದೊರೆಯಲಿಲ್ಲ. ಕಾರಣ ಇಲ್ಲಿಯ ರಾಜಕೀಯ ಸಂಘರ್ಷಗಳು, ತ್ರಿಭಾಷೀಕರಣದ ಪ್ರಭಾವದಿಂದ ಇಲ್ಲಿನ ಲೇಖಕರು ಆಧುನಿಕ ಸಾಹಿತ್ಯದ ಚಹರೆ ಅರಿಯದಾದರು. ಅರಿಯಲು ಪ್ರಯತ್ನಿಸಿದರೂ ಅದರ ಲಯ ಅವರಿಗೆ ಸಿಕ್ಕಲಿಲ್ಲ. ಅದಕ್ಕಾಗಿ ಆ ಪ್ರದೇಶದ ವಾಸ್ತವದ ಸಂಗತಿಗಳಾದ ನಿಜಾಮಶಾಹಿ ಆಡಳಿತ, ಅಸಫ್‌ಶಾಹಿ, ಮೊಗಲಾಯಿಗಳ ಆಡಳಿತ, ರಾಜಕೀಯ ಸ್ಥಿತ್ಯಂತರಗಳು ಸಾಮಾಜಿಕ, ಆರ್ಥಿಕ ಸ್ಥಿತಿಗತಿ, ಗ್ರಾಮೀಣ ಬದುಕು, ಇವುಗಳು ಕಥನಕ್ರಮದಲ್ಲಿ ಮೂಡಿಬಂದಿವೆ. ತ್ರಿಭಾಷೀಕರಣ ಪ್ರಭಾವದಿಂದಾಗಿ ಗ್ರಾಮೀಣ ಪ್ರದೇಶ ಮತ್ತು ಮಠಮಾನ್ಯಗಳಲ್ಲಿ ಮಾತ್ರ ಕನ್ನಡ ಸಾಹಿತ್ಯ ಉಸಿರಾಡುತ್ತಿತ್ತು. ಇಂತಹ ಸಂದಿಗ್ಧದ ಸಂದರ್ಭದಲ್ಲಿ ಬೆರಳೆಣಿಕೆಯಷ್ಟು ಲೇಖಕರು ಕಾಣುತ್ತಾರೆ. ಅಂತಹ ಮಹತ್ವಪೂರ್ಣ ಹಿರಿಯ ತಲೆಮಾರಿನ ಲೇಖಕರಲ್ಲಿ ಶಾಂತರಸರು ಒಬ್ಬರಾಗಿದ್ದಾರೆ. ೧೯೬೦ರ ದಶಕದಲ್ಲಿ ಅದ್ಭುತವಾಗಿ ದೊಡ್ಡದಾದ 'ಸಣ್ಣಗೌಡಸಾನಿ' ಕಾದಂಬರಿ ರಚಿಸಿದ್ದರು. ಇದು ಪ್ರಕಾಶಕರ ಕೊರತೆಯಿಂದ ಹಸ್ತಪ್ರತಿಯಾಗಿ ಹದಿನೈದು-ಇಪ್ಪತ್ತು ವರ್ಷಗಳವರೆಗೆ ಮನೆಯಲ್ಲಿಯೇ ಇದ್ದು, ಕಾಲಾಂತರದಲ್ಲಿ ಪ್ರಕಟವಾಯಿತು. ಹೈದರಾಬಾದ್ ಕರ್ನಾಟಕದ ಸ್ವತಂತ್ರಪೂರ್ವ ಕಾಲಘಟ್ಟದ ನಿಜಾಮಶಾಹಿ ಆಡಳಿತ ವ್ಯವಸ್ಥೆಯಲ್ಲಿ ಗಜಲ್, ಗಾಯನ, ನೃತ್ಯ ಮಾಡುತ್ತ ಬದುಕುವ ಮುಸ್ಲಿಂ ಧರ್ಮದ 'ಜಾತಿಗೇರ' ಎಂಬ ಉಪಪಂಗಡದ ಒಂದು ಮಹಿಳೆಯನ್ನು ಸುತ್ತಿಕೊಂಡು, ಇಡೀ ಹೈದರಾಬಾದ್ ಕರ್ನಾಟಕದ ಜನಪದ ಕಲೆ ಮತ್ತು ಸಾಂಸ್ಕೃತಿಕ ಬದುಕನ್ನು ಚಿತ್ರಿಸಿದ ಕಾದಂಬರಿಯಾಗಿದೆ. ಅಲ್ಲದೆ ಜಾತಿಗೇರ ಸಮುದಾಯದ ಅಲೆಮಾರಿಗಳ ಬದುಕು-ಬವಣೆ, ಸಂವೇದನೆಗಳು ಕೂಡ ಅನಾವರಣಗೊಂಡಿವೆ.

ಈ ಕಾದಂಬರಿಕಾರರು ನಿಜಾಮಶಾಹಿ ಸಂಸ್ಥಾನ, ಎಡೆದೊರೆಯ ನಾಡೆಂದು ಕರೆಯುವ ಹೈದರಾಬಾದ್ ಕರ್ನಾಟಕದ ರಾಯಚೂರು ಜಿಲ್ಲೆಯವರಾಗಿದ್ದಾರೆ. ಹುಟ್ಟಿ ಬೆಳೆದ ನೆಲದ ಸತ್ವವನ್ನು ಗುರುತಿಸಿದ ಹಿರಿಯ ತಲೆಮಾರಿನ ಲೇಖಕ ಇವರಾಗಿದ್ದಾರೆ. ಈ ಪ್ರದೇಶದಲ್ಲಿ ನಡೆದಿರುವ ರಾಜಕೀಯ ಸಂಘರ್ಷ, ಆಡಳಿತದ ಸ್ಥಿತ್ಯಂತರ, ತ್ರಿಭಾಷೀಕರಣ ಪ್ರಭಾವದಿಂದ ಕನ್ನಡಭಾಷೆ ಅತಂತ್ರ ಪರಿಸ್ಥಿತಿ ಎದುರಿಸಿದರೂ ಅದು ಗ್ರಾಮೀಣ ಪ್ರದೇಶದಲ್ಲಿ ಬದುಕುವ ಜನಸಾಮಾನ್ಯರ ಉಸಿರಲ್ಲಿ ಉಳಿದ ಭಾಷೆಯನ್ನೇ ತಮ್ಮ ಸಾಹಿತ್ಯ ಬರವಣಿಗೆಗೆ ನಿರ್ಲಿಪ್ತತೆಯಿಂದ ಬಳಸಿದರು. ಉತ್ತಮ ನಿರೂಪಣೆಯನ್ನು ಸಾಧಿಸಿದರು. ಕಾದಂಬರಿಯಲ್ಲಿ ಸಮಾನತೆ, ಗಟ್ಟಿತನದ ಸತ್ವವನ್ನು ಕಾಯ್ದುಕೊಂಡಿದ್ದಾರೆ. ಆ ಪ್ರದೇಶದ ಗ್ರಾಮೀಣ ವಾಸ್ತವ ಬದುಕನ್ನು ಕಂಡದ್ದು ಕಂಡ ಹಾಗೆ ಮುಜುಗರಪಡದೆ ಮುಕ್ತವಾಗಿ ಅಭಿವ್ಯಕ್ತಿಸಿದ್ದಾರೆ. ಸರಳವಾಗಿ ಇಡೀ ಬದುಕನ್ನು ಬರವಣಿಗೆಯ ಮೂಲಕ ಕಟ್ಟಿಕೊಟ್ಟಿದ್ದಾರೆ.

ಈ ಕಾದಂಬರಿಯಲ್ಲಿ ಬರುವ ಮಾಬು(ಮಹೆಬೂಬಜಾನ್) ಅಲೆಮಾರಿ ಜಾತಿಗೇರ ಬುಡಕಟ್ಟು ಜನಾಂಗಕ್ಕೆ ಸೇರಿದ ಮಹಿಳೆಯಾಗಿದ್ದಾಳೆ. ಈ ತಳಸಮುದಾಯದ ಹೈದರಾಬಾದ್ ಕರ್ನಾಟಕದಲ್ಲಿ ಕಂಡುಬರುವ ಒಂದು ಸಮುದಾಯವಾಗಿದೆ. ಈ ಪ್ರದೇಶದಲ್ಲಿ ಅನೇಕ ರಾಜಕೀಯತೆ, ಮುಸ್ಲಿಂ ಪ್ರಭಾವವಿರುವುದು ಕಂಡುಬರುತ್ತದೆ. ಆ ಸಂದರ್ಭದಲ್ಲಿ ಇಂತಹ ಸ್ತ್ರೀಯರು ಕಾಣುತ್ತಾರೆ. ಹಿಂದೂ-ಮುಸ್ಲಿಂ ಒಂದಾಗಿ ಬಾಂಧವ್ಯದಿಂದ ಬಾಳುವಂತಹ ಸಮಯದಲ್ಲಿ ರಾಜಾಕಾರ ಕುತಂತ್ರಗಳಿಂದ ಸುಸಂಘಟಿತ ಸಾಮಾಜಿಕ ವ್ಯವಸ್ಥೆ ಮುರಿದು ಹೋಗಿ ಇಂತಹ ಸಮುದಾಯದ ಬದುಕು, ಹೆಣ್ಣುಗಳು ಬೀದಿಪಾಲು ಆಗುವುದಕ್ಕೆ ಮೂಲ ಕಾರಣವಾಗಿದೆ.

### ಜಾತಿಗೇರ ಸಮುದಾಯ

ಇವರು ಅಲೆಮಾರಿ ಬುಡಕಟ್ಟಿನ ಜಾತಿಗೇರ ತಳಸಮುದಾಯಕ್ಕೆ ಸೇರಿದವರು ಹಾಗೂ ತಮ್ಮದೇಯಾದ ಸ್ಥಿರವಾದ ಅಸ್ತಿತ್ವವಿಲ್ಲದೇ ಬದುಕುವವರು. ಇವರು ಉಪಜೀವನ ಸಾಗಿಸುವದಕ್ಕಾಗಿ, ತುತ್ತಿನ ಚೀಲ ತುಂಬಿಸಿಕೊಳ್ಳಲು ದೇಶಿಯ ಜನಪದ ರಂಗಕಲೆಯಾದ ಸಣ್ಣಾಟ, ಬಯಲಾಟ, ತತ್ವಪದ, ರೂಢಿಸಿಕೊಂಡು ಊರೂರು ಅಲೆಯುತ್ತಾರೆ. ಫ್ಯೂಡಲ್‌ಗಳು ಆಟ ಕೊಟ್ಟರೆ ಆಡುವಂತಹವರು. ಮೇಲುವರ್ಗ ಯಜಮಾನಿಕೆಯ ಅಡಿಯಲ್ಲಿ ಬದುಕುವ ಸಾಮಾಜಿಕ ವ್ಯವಸ್ಥೆಯಲ್ಲಿ ಕ್ಲಿಷ್ಟವಾದ ಅಪಮಾನದ ಬದುಕಿನ ಬಂಡಿಯನ್ನು ನಡೆಸುವ ಶೋಚನೀಯ ಸ್ಥಿತಿ ಇವರದಾಗಿದೆ.

### ಜಾತಿಗೇರ ಸಮುದಾಯದ ವೃತ್ತಿ

ಈ ಸಮುದಾಯ ಮುಸ್ಲಿಂ ಜಾತಿಗೆ ಸೇರಿದ ಒಂದು ಉಪಜಾತಿಯಾಗಿದೆ. ಉಪಜೀವನಕ್ಕಾಗಿ ಜನಪದ ರಂಗಕಲೆ ರೂಢಿಸಿಕೊಂಡು ಬದುಕುವಂತದ್ದಾಗಿದೆ. ಇವರು ಹೈದರಾಬಾದ್ ಕರ್ನಾಟಕ

ನಿಜಾಮ್, ಮೊಗಲಾಯಿಗಳ ಆಳ್ವಿಕೆಯ ಸಮಯದಲ್ಲಿ ಅರಮನೆ ಗಾನಪಾರ್ಟಿಯಲ್ಲಿ ಕುಣಿದು, ಹಾಡುತ್ತಿದ್ದರೂ ಈ ವ್ಯವಸ್ಥೆ ಬದಲಾದಂತೆ, ಇವರ ಜೀವನದ ಪರಿಸ್ಥಿತಿಯು ಅತಂತ್ರವಾಗಿ ಬೀದಿಗೆ ಬಂದರೂ ಅಂತಹ ಸಂದರ್ಭದಲ್ಲಿ ತಮ್ಮ ಅಸ್ತಿತ್ವಕ್ಕಾಗಿ ಇವರು ಜನಪದ ರಂಗಕಲೆಯನ್ನು ರೂಢಿಸಿಕೊಂಡರು. ಜಮೀನ್ದಾರರು ಆಟ ಕೊಟ್ಟಲ್ಲಿಗೆ ಹೋಗುವ ಕಾರಣ ನೆಲೆಯಿಲ್ಲದೆ ಅಲೆಮಾರಿಗಳಾದವರು. ಇಂತಹದಕ್ಕೆ ತೊಡಗಿದ ಅಭಿನೇಯತ್ರಿಯರು, ಕಾಲಾಂತರದಲ್ಲಿ ಮೈಮಾರುವ ವೇಶ್ಯೆಯರಾದಕ್ಕೆ ಕಾರಣ ಆರ್ಥಿಕ ಹೊರೆ ಮತ್ತೊಂದು ಅವರ ಸೌಂದರ್ಯ ಕಾಮುಕರ ಕಣ್ಣಿಗೆ ಬಿದ್ದು ಬಲಿಪಶುವಾಗುವಂಥದ್ದು. ಕಾಲಾಂತರದಲ್ಲಿ ಕೇವಲ ಒಬ್ಬರಲ್ಲಿ 'ಖಾಯಂ' ಸೂಳೆಯರಾಗಿದ್ದಾರೆ. ಕೆಲವರು ಅದೇ ಜನಾಂಗದಲ್ಲಿ ಮದುವೆಯಾದರೂ ಸಹ ಮೈಮಾರಿಕೊಳ್ಳುವುದು ಕಾಣುತ್ತದೆ. ಏಕೆಂದರೆ ಬಡತನ ಹಾಗೂ ಕೀಳುಕುಲದಲ್ಲಿ ಹುಟ್ಟಿದ ಕಾರಣಕ್ಕೆ ಇಂತಹ ವೃತ್ತಿಯಲ್ಲಿ ಮುಂದುವರಿಯುವುದು ಇಲ್ಲಿ ಅನಾವರಣಗೊಂಡಿದೆ.

**ಜಮೀನ್ದಾರಿ ವ್ಯವಸ್ಥೆ**

ಶತ-ಶತಮಾನಗಳಿಂದ ಸನಾತನವಾದಿಗಳು, ಮೇಲುವರ್ಗದವರು ತಳವರ್ಗವನ್ನು ತುಳಿತಕ್ಕೆ ಒಳಪಡಿಸುತ್ತಲೇ ಬಂದಿದ್ದಾರೆ. ಈ ಶ್ರೇಣೀಕೃತ ವ್ಯವಸ್ಥೆಯಲ್ಲಿ ಇವರನ್ನು ಕೆಳಸ್ತರದಲ್ಲಿ ಇಟ್ಟು ಶೋಷಣೆ ಮಾಡುವುದು, ನಿನ್ನೆ-ಇವತ್ತಿನ ಸಂಗತಿಯಲ್ಲ ಇದು ಚರಿತ್ರೆಯ ಉದ್ದಕ್ಕೂ ಚಾಚಿಕೊಂಡಿದೆ. ಅದರಂತೆ ಹೆಣ್ಣು ಕೂಡ ಒಂದು ಭೋಗದ ವಸ್ತುವಾಗಿ ಪ್ರತಿರೂಪಿತಳಾಗಿ ಶೋಷಣೆಗೆ ಒಳಗಾಗಿರುವುದು ಕಾಣುತ್ತೇವೆ. ಹಾಗೆಯೇ ಈ ಹೈದರಾಬಾದ್ ಕರ್ನಾಟಕದಲ್ಲಿ ೬೦-೭೦ರ ದಶಕದಲ್ಲಿ ಜಮೀನ್ದಾರರು, ಸಾವುಕಾರ, ದೇಸಾಯಿ, ಹಣವಂತರ ಮನೆಗಳಲ್ಲಿ ಜಾತಿಗೇರ ಜನಾಂಗಕ್ಕೆ ಸೇರಿದ ಮಹಿಳೆಯರು ಇರುತ್ತಿದ್ದರು, ಇದು ಸಾಮಾನ್ಯ ವಿಷಯವಾಗಿತ್ತು. ಹೆಣ್ಣು ಪ್ರತಿಷ್ಠೆ, ಪ್ರದರ್ಶನದ ಸಂಕೇತವಾಗಿ ಫ್ಯೂಡಲ್‌ಗಳು ಜಾತಿಗೇರ ಹೆಣ್ಣನ್ನು 'ಖಾಯಂ' ಆಗಿ ಇಟ್ಟುಕೊಳ್ಳುತ್ತಿದ್ದರೂ ಸುಂದರವಾದ ಮಹಿಳೆ ಇದ್ದರೆ ಹೆಚ್ಚಿನ ಹಣತೆತ್ತು ಪಡೆದುಕೊಳ್ಳುವರು. ಹೆಂಡತಿಯಂತೆ ಖಾಯಂ ಮಾಡಿಕೊಳ್ಳುವುದಕ್ಕೆ ಕಾರಣ ತಾವು ಭೋಗಿಸಿದ ಹೆಣ್ಣು ಅನ್ಯರ ಅಥವಾ ಮತ್ತೊಬ್ಬರ ಭೋಗದ ವಸ್ತುವಾಗಿ ಬಿಟ್ಟುಕೊಡಲು ಒಪ್ಪುತ್ತಿರಲಿಲ್ಲ ಅದಕ್ಕಾಗಿ ಇವರನ್ನು ಖಾಯಂ ಇಟ್ಟುಕೊಳ್ಳುವ ಮೂಲಕ ಪ್ರತಿಷ್ಠೆ ಮೆರೆಯುತ್ತಿದ್ದರು. ಇಲ್ಲಿ ಹೆಣ್ಣು ಕೇವಲ ಒಂದು ಮೂಕಪ್ರಾಣಿಯಾಗಿದ್ದಾಳೆ. ಈ ವ್ಯವಸ್ಥೆ ಹೆಣ್ಣನ್ನು ದ್ವಿತೀಯದರ್ಜೆಯವಳಾಗಿ ಕಾಣುವುದು. ಇವಳಿಗೆ ಸ್ವತಂತ್ರ ಅಸ್ತಿತ್ವವಿಲ್ಲದ ಬದುಕು ಸೂತ್ರವಿರದ ಗಾಳಿಪಟದಂತಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಫ್ಯೂಡಲ್‌ಗಳಿಗೆ ಇಷ್ಟವಾದರೆ ಅವಳಿಗೆ ಒಪ್ಪಿಗೆ ಇರಲಿ, ಇರದೇ ಇರಲಿ ಸನಾತನವಾದಿ ಮನಸ್ಸುಗಳಿಗೆ ತಲೆಬಾಗಲೇ ಬೇಕಾಗಿದೆ. ಇದು ಉನ್ನತವರ್ಗದ ಕುಯುಕ್ತಿಯಾಗಿದೆ. ಇದು ಈ ಕಾದಂಬರಿಯ ಒಡಲಿನಲ್ಲಿ ಅನಾವರಣಗೊಂಡಿದೆ.

**ಜಾತಿಗೇರ ಸಮುದಾಯದ ಹೆಣ್ಣಿನ ಬವಣೆ**

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಸನಾತವಾದಿಗಳು ಇಂತಹ ಅಮಾನುಷ ವ್ಯವಸ್ಥೆಯನ್ನು ರೂಪಿಸಿಕೊಂಡಿದ್ದಾರೆ. ಯಾಕೆಂದರೆ ತಮ್ಮ ಕಾಮುಕ ತೃಷೆ ಈಡೆರಿಸುವ ಸಲುವಾಗಿ ರೂಪಿಸಿದ ವ್ಯವಸ್ಥೆಯಾಗಿದೆ. ತಳಸಮುದಾಯದ ದಲಿತ ಕೀಳು ಕುಲಗಳ ಶೋಷಣೆ ಒಂದು ಕಡೆಯಾದರೆ ಆ ವರ್ಗದ ಹೆಣ್ಣನ್ನು ನಡುಬೀದಿಯಲ್ಲಿ ಇಟ್ಟು ಶೋಷಣೆ ಮಾಡುವುದರ ಜೊತೆಗೆ ಕೇವಲ ಭೋಗದ ಸರಕಾಗಿ ಕಾಣುವಂತಹದು ದುರಂತದ ಸಂಗತಿಯಾಗಿದೆ. ಜಾತಿಗೇರ ಸಮುದಾಯದ ಮಹಿಳೆ ಕಲೆಯನ್ನೇ ಜೀವನವಾಗಿಸಿಕೊಂಡು ಗಾನ ಪಾರ್ಟಿಗಳಲ್ಲಿ ಕುಣಿಯುವುದು, ಹಾಡುವುದು ಕಲೆಯಾಗಿಸಿಕೊಂಡರೆ ಮತ್ತೊಂದೆಡೆ ಅವರು ಆರ್ಥಿಕ ಸಂಕಷ್ಟ ನಿಭಾಯಿಸುವ ಸಲುವಾಗಿ ಮೈಮಾರುವಂತಹದು ಕಾಣುತ್ತದೆ. ಈ ಸ್ತ್ರೀಯರು ಚೆಲುವೆಯರಾಗಿದ್ದರೆ, ಇವರು ಪ್ರೇಕ್ಷಕ ಹಣವಂತರಿಗೆ ಸನಾತನವಾದಿಗಳಿಗೆ ಮೆಚ್ಚಿಗೆಯಾದರೆ ಅವರು ಅನಿವಾರ್ಯವಾಗಿ ಅವರ ಮಂಚಕ್ಕೆ ಭೋಗದ ವಸ್ತುವಾಗಿ ಹೋಗುವ ಪರಿಸ್ಥಿತಿಗಳು ಬಂದು ಹೊಗುತ್ತವೆ. ಅದೇ ವೇಶ್ಯಾವಾಟಿಕೆ ಮೈಮಾರುವ ಪದ್ಧತಿಯಾಗಿ ಮುಂದುವರಿದಿರುವುದಾಗಿದೆ.

ಜಾತಿಗೇರ ಸಮುದಾಯದ ಹೆಣ್ಣುಗಳಿಗೆ ಕಲೆಯೇ ಜೀವನವಾಗಿತ್ತು ಇವರು ಕಾಲದ ಕ್ರೌರ್ಯಕ್ಕೆ ಸಿಕ್ಕು ಅಮಾನುಷ ಮಾಂಸದ ಮುದ್ದೆಯಾಗಿ ಕಾಮುಕರ ಬಲಿಗೆ ಸಿಕ್ಕು ಅನುಭವಿಸುವ ಸಂಕಷ್ಟವು ದುರಂತವಾಗಿದೆ. ಇವರು ಆರ್ಥಿಕ ಅಸಮಾನತೆ ಸರಿದೂಗಿಸಲು ಇಂತಹ ನೀಚ ಕೃತ್ಯಕ್ಕೆ ಅನಿವಾರ್ಯವಾಗಿ ಇಳಿಯುತ್ತಾರೆ. ಇದರ ಕಷ್ಟ ಅರಿತು ಒಬ್ಬರಿಗೆ ಖಾಯಂ ಆಗಿ ಉಳಿಯಲು ಇಚ್ಛಿಸಿರುವುದನ್ನು ಈ ಕಾದಂಬರಿಯಲ್ಲಿ ನಿರೂಪಿತವಾಗಿದೆ.

**ಖಾಯಂ ಪದ್ಧತಿ**

ಹೈದರಾಬಾದ್ ಕರ್ನಾಟಕದಲ್ಲಿ ೬೦-೭೦ರ ದಶಕದ ಸಮಯದಲ್ಲಿ ಶ್ರೀಮಂತರು, ಜಮೀನ್ದಾರರಲ್ಲಿ ಜಾತಿಗೇರ ಸಮುದಾಯದ ಹೆಣ್ಣು ಪ್ರತಿಯೊಬ್ಬರ ಮನೆಗಳಲ್ಲಿ ಖಾಯಂ ಸೂಳೆಯರಾಗಿ ಇರುತ್ತಿದ್ದರು. ಇದು ಅವರ ಘನತೆ, ಪ್ರತಿಷ್ಠೆಯ ಸಂಕೇತವಾಗಿದೆ. ಮತ್ತೊಂದು ಸಂಗತಿ ಈ ಸಮುದಾಯದ ಹೆಣ್ಣಿಗೆ ಯೌವ್ವನ ಇರುವವರಿಗೆ ಮಾತ್ರ ಬೆಲೆ. ರಸಿಕರಿಗೆ ಯೌವ್ವನ ಇರುವ ಹೆಂಗಸಿನ ಗಾನ, ಅಭಿನಯ ಅವರಿಗೆ ರುಚಿಸುತ್ತದೆ. ಇವರ ಯೌವ್ವನ ದೇಹ ಸೌಂದರ್ಯ ಕುಗ್ಗಿದಂತೆ ಎಲ್ಲ ರೀತಿಯ ದುಡಿಮೆ ಕಡಿಮೆಯಾಗಿ ಅವರು ಅತಂತ್ರ ಸ್ಥಿತಿಯನ್ನು ತಲುಪುತ್ತಾರೆ. ಈ ಜನಾಂಗದಲ್ಲಿ ಗಂಡನಿದ್ದರೂ ಈ ಪದ್ಧತಿ ಅನುಸರಿಸಲೇಬೇಕಾದ ಅನಿವಾರ್ಯತೆಯಾಗಿದೆ. ನಂತರ ಗಂಡಸರು ಹೇಗೋ ಬದುಕುತ್ತಾರೆ. ಆದರೆ ಮಹಿಳೆಯರು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವುದಕ್ಕಾಗಿ ಒಬ್ಬರಲ್ಲಿ ಖಾಯಂ ಆಗಿ ಇರುವುದಕ್ಕೆ ಇಚ್ಛಿಸುತ್ತಾರೆ.

ಹೀಗೆ ಹೋದ ಹೆಣ್ಣುಗಳ ಒಂದೊಂದು ರೀತಿಯ ಪರಿಸ್ಥಿತಿ ಎದುರಿಸುತ್ತಾರೆ. ಹೀಗೆ ಹೋದ ಹೆಣ್ಣಿನ ಗತಿ ಸ್ಥಾನಮಾನ ಎಂಥದು ಎಂಬ ಪ್ರಶ್ನೆಗೆ ಒಂದೊಂದು ಕಥೆಯಿದೆ. ಆದರೆ ಅದನ್ನು ಅನುಸರಿಸಿದ ಮಹಿಳೆಗೆ ಸಮಾಜದಲ್ಲಿ ಎರಡನೇ ದರ್ಜೆಯ ಸ್ಥಾನ ಮಾತ್ರ ದೊರಕುತ್ತದೆ. ಹೀಗೆ ಹೋದ ಹೆಣ್ಣು ಸುಖವಾಗಿ ಇರುತ್ತಾಳೆಯೇ ಎಂಬ ಪ್ರಶ್ನೆಗೆ ಉತ್ತರ ಒಬ್ಬೊಬ್ಬರಿಗೆ ಒಂದೊಂದು ಕಥೆಯಿದೆ. ಅಂತಹ ಸಮುದಾಯದೊಳಗಿನ ಮಾಬಮ್ಮನ ಕಥೆಯು ಒಂದು ಭಾಗವಾಗಿದೆ. ಈ ಕಾದಂಬರಿಯಲ್ಲಿ ಜಮೀನ್ದಾರರ ಹಾದರತನ, ಚಟ, ಪ್ರತಿಷ್ಠೆ ಸಂಕೇತ ಗುರುತಿಸಿ ಸನಾತವಾದಿಗಳು ಈ ವರ್ಗದ ಹೆಣ್ಣನ್ನು 'ಖಾಯಂ' ಇಟ್ಟುಕೊಂಡು ಹಾದರತನ ಪ್ರತಿಷ್ಠೆ ಹೆಸರಲ್ಲಿ ಮರೆಮಾಚಿರುವ ಕುಯುಕ್ತಿಯನ್ನು ಲೇಖಕರು ಸೂಕ್ಷ್ಮವಾಗಿ ಗ್ರಹಿಸಿ ಕಾದಂಬರಿಯಲ್ಲಿ ನಿರೂಪಿಸಿದ್ದಾರೆ.

**ಜಾತಿಗೇರ ಮಾಬಮ್ಮ ಜೀವನದ ಮೂಲ ವೃತ್ತಾಂತ**

ಕಲೆ ರೂಪಿಸಿಕೊಂಡ ಮಾಬಮ್ಮ ತನ್ನ ದೊಡ್ಡಮ್ಮ ಮಾಣಿಕಸಾನಿ ಜೊತೆಗೆ ಹೈದರಾಬಾದ್ ಕರ್ನಾಟಕ ಪ್ರದೇಶದ ಗಂಗನಹಳ್ಳಿಯಲ್ಲಿ ಬಯಲಾಟ ಆಡಲು ಬರುತ್ತಿರುತ್ತಾರೆ. ಈ ತಂಡದಲ್ಲಿ ನಾಲ್ಕು ಜನ ಸ್ತ್ರೀಯರು ಇದ್ದರೂ, ಅವರಲ್ಲಿ ಮಾಬು ಬಹುಸುಂದರಿಯಾಗಿದ್ದಳು. ಇವಳು ಮೈಮಾರುವ ದಂಧೆ ಮಾಡುತ್ತಿರಲಿಲ್ಲ. ಅವಳು ಮೌನ ಮತ್ತು ಗಂಭೀರವಾಗಿದ್ದು, ತತ್ವಪದ ಹಾಡುವಂತಹವಳು. ಅವಳು ಗಂಗನಹಳ್ಳಿಯ ಜನರಿಗೆ ಒಂದು ಒಗಟಾಗಿ ಕಾಣುತ್ತಾಳೆ. ಆದರೂ ಸನಾತನವಾದಿ ಮನಸ್ಸುಗಳ ಪೈಪೋಟಿ ಮತ್ತು ದೊಡ್ಡಮ್ಮನ ಸಂದಿಗ್ಧ ಪರಿಸ್ಥಿತಿಯನ್ನು ಅರಿತು ಅನಿವಾರ್ಯವಾಗಿ ಸೂಗನಗೌಡನ 'ಖಾಯಂ' ಹೆಣ್ಣಾಗಿ ಅವನ ಮನೆ ಸೇರುತ್ತಾಳೆ. ಆ ಸಮುದಾಯದ ಇತರ ಹೆಣ್ಣುಗಳು ಸೇರುವಂತೆ ಸೇರದೆ ಅನಿವಾರ್ಯತೆಯಿಂದ ಸೇರುತ್ತಾಳೆ.

ಮಾಬಿಯ ತಾಯಿ ಬಹು ವರ್ಷಗಳ ಹಿಂದೆ ತನ್ನ ದೊಡ್ಡಮ್ಮ ಮಾಣಿಕಸಾನಿ ತಂಗಿ ರತ್ನಸಾನಿಯಾಗಿದ್ದಳು. ಇವಳು ಬಹು ಚೆಲುವೆಯಾಗಿದ್ದರಿಂದ ನನ್ನ ತಂದೆ ಸುಸಂಸ್ಕೃತನಾದ ಮಹದೇವಪ್ಪ ಮೆಚ್ಚಿ 'ಖಾಯಂ' ಹೆಣ್ಣಾಗಿ ಇಟ್ಟುಕೊಂಡಿರುತ್ತಾನೆ. ಅವನೊಂದಿಗೆ ಸಂಸಾರ ಜೀವನ ಸಾಗಿಸಿದ ಪರಿಣಾಮದಿಂದ ಮಾಬು ಹುಟ್ಟಿದಳು. ಮಾಬು ಮಹದೇವಪ್ಪನ ಮುದ್ದಿನ ಮಮತೆಯ ಮಗಳಾಗಿ ಬೆಳೆದಳು. ಇದರಿಂದ ತಂದೆಯ ಅನುಭಾವಿ ಗುಣಗಳನ್ನು ಇವಳು ಸಹಜವಾಗಿಯೇ ದಕ್ಕಿಸಿಕೊಂಡಿದ್ದಳು. ಆದರೆ ಅವಳನ್ನು ಈ ಸಮಾಜ ಎರಡನೇ ದರ್ಜೆಯ ಹೆಂಗಸನ್ನಾಗಿಯೇ ನೋಡುತ್ತಾರೆ. ತಂದೆ ಅನಾರೋಗ್ಯನಾದನು ಮತ್ತು ತಾಯಿ ಇಳಿವಯಸ್ಸಿನವಳಾಗಿದ್ದರಿಂದ ಮಾಬಿಯನ್ನು ತಮ್ಮ ದಂಧೆಗೆ ದೂಡಲು ಪ್ರಯತ್ನಿಸುತ್ತಾಳೆ. ಆದರೆ ಮಾಬಿ ಎಲ್ಲರಂತೆ ಮದುವೆ ಮಾಡಿಕೊಂಡು ಗೌರವಯುತವಾಗಿ ಬಾಳಬೇಕೆಂದು ಬಯಸುತ್ತಾಳಾದರೂ ಸನಾತನವಾದಿ ಸಾಮಾಜಿಕ ವ್ಯವಸ್ಥೆ ಅದಕ್ಕೆ ಅವಕಾಶ ಕೊಡುವುದಿಲ್ಲ. ತಂದೆ ಜೀವಂತ ಇರುವಾಗಲೇ ಮಾಬಿ ಒಬ್ಬ ಸೂಳೆಯ ಮಗಳೆಂಬ ಕಾರಣಕ್ಕೆ ಊರ ಕಾಮುಕರ ಕೆಂಗಣ್ಣಿಗೆ ಒತ್ತಿ

ನಿಲ್ಲುತ್ತಾಳೆ. ತಂದೆಗೆ ಸಂಕಟವಾದರೂ ಅಸಹಾಯಕನಾಗುತ್ತಾನೆ. ಅವನ ಮರಣದ ನಂತರ ಅಲ್ಲಿ ಮಾಬಿಗೆ ನೆಲೆಯಿಲ್ಲದಾಗಿ ಅನಿವಾರ್ಯವಾಗಿ ದೊಡ್ಡಮ್ಮನ ಆಶ್ರಯ ಪಡೆಯುತ್ತಾಳೆ. ಸ್ವಲ್ಪ ದಿನ ಕಳೆದ ನಂತರ ಹೊಟ್ಟೆಪಾಡಿಗಾಗಿ ಸಂಗೀತ ಅಭಿನಯ ಮಾಡುತ್ತಾಳೆ ಹೊರೆತು ಮೈಮಾರುವ ದಂಧೆ ಮಾಡುವುದಿಲ್ಲ. ಊರೂರು ಅಲೆಯುವ ಮಾಣಿಕಸಾನಿಗೆ ಮಾಬಿ ಭಾರವಾಗುತ್ತಾಳೆ. ಕಾರಣ ಮಾಬಿ ಬಹುಚೆಲುವೆ. ಇವಳನ್ನು ನೋಡಿದ ಫ್ಯೂಡಲ್‌ಗಳು ಕೊಳ್ಳಲು ಒತ್ತಾಯಗಳು ಕಿರಿಕಿರಿ ಸಂಭವಿಸುತ್ತವೆ. ಅನಿವಾರ್ಯವಾಗಿ ಸಂಗೀತ, ಅಭಿನಯ ಕಲೆ ಕಲಿತು ರಸಿಕರನ್ನು ರಂಜಿಸಿ ಮನತಣಿಸಿದ್ದು ನಿಜ. ಆದರೇ ಅವಳೂ ಕಂಡ ಕಂಡವರಿಗೆ ಮೈನೀಡುವುದಕ್ಕೆ ನಿರಾಕರಿಸಿದಳು. ಮದುವೆಯಾಗಿ ಬಾಳುವ ಆಸೆ ಹೊತ್ತಿರುತ್ತಾಳೆ. ಅವಮಾನಿಯ ವೃತ್ತಿ ಮಾಡುವ ಪರಿಸರದಲ್ಲಿ ಆದರ್ಶತನದ ಬದುಕಿನ ಬಗ್ಗೆ ಚಿಂತಿಸಿದಂತಾಗಿದೆ. ದೊಡ್ಡಮ್ಮನಿಗೆ ಅನೇಕ ಸಂದಿಗ್ಧ ಪರಿಸ್ಥಿತಿ, ಬಿಕ್ಕಟ್ಟುಗಳು ಎದುರಾಗುತ್ತವೆ. ಇದನ್ನು ಅರಿತ ಮಾಬಿಯೇ ಅನಿವಾರ್ಯವಾಗಿ ಗಂಗನ ಹಳ್ಳಿಯ ಸೂಗನಗೌಡನ ಸ್ವಭಾವಕ್ಕೆ ಮೆಚ್ಚಿ ಖಾಯಂ ಹೆಣ್ಣಾಗಿ ಅವನ ಮನೆ ಸೇರಿ ಮಾಬಮ್ಮನಾಗುವಂತದು ಇಲ್ಲಿ ನಿರೂಪಿತವಾಗಿದೆ.

### ಗಂಗಪ್ಪನ ಸ್ವಾಭಿಮಾನದ ಪ್ರಶ್ನೆ

ಶತ ಶತಮಾನಗಳ ವ್ಯವಸ್ಥೆಯನ್ನು ಪರಿಕ್ಷಿಸಿ ನೋಡಿದಾಗ ನಮಗೆ ಸಿಗುವುದು ಯುದ್ಧ, ಕಲಹ, ದ್ವೇಷ, ಅಸೂಯೆಗಳು. ಆದರೆ ಅಲ್ಪಮಟ್ಟಿಗೆ ಪ್ರೀತಿ, ಮಮತೆ ಉಳಿದಿದೆ. ಒಬ್ಬರ ಶ್ರೇಯಸ್ಸು ಇನ್ನೊಬ್ಬರು ಸಹಿಸದೆ ಕ್ರೂರ ಮನಸ್ಸುಗಳೇ ಇದ್ದದ್ದರಿಂದ ಅನೇಕರಲ್ಲಿ ಮನಸ್ತಾಪ, ಸಂಘರ್ಷಕ್ಕೆ ಮೂಲಕಾರಣವಾಗಿ ಶಕುನಿತನದ ತಂತ್ರಗಾರಿಕೆ ದ್ವೇಷಕ್ಕೆ ಹಾಗೂ ಮನುಷ್ಯತ್ವದ ಅವನತಿಗೆ ಮುಖ್ಯ ಕಾರಣವಾಗುತ್ತದೆ. ಅದರಂತೆ ಗಂಗಪ್ಪನಿಗೆ ತನ್ನನ್ನು ನಿರಾಕರಿಸಿ ದಾಯಾದಿ ಮನೆ ಸೇರಿದ್ದು ನುಂಗಲಾರದ ತುತ್ತಾಗಿದೆ ಮತ್ತು ನಿರಾಸೆ ಸಹ ಮೂಡಿದೆ. ಈ ಕೊರಗು ಕಟ್ಟಿಗೆ ಹುಳುವಿನಂತೆ ಕೊರೆಯತೊಡಗಿತ್ತು. ಆ ಸಮಯದಲ್ಲಿ ಹನುಮಪ್ಪ "ನಿನ್ನ ದೈವಿಲ್ಲಪಾ ಸಾವುಕಾರ"[೨] ಮಾತು ಸನಾತನವಾದಿ ಮನಸ್ಸು ಒಪ್ಪಲಿಲ್ಲ. ಏಕೆಂದರೆ ಜಾತಿಗೇರ ಹೆಣ್ಣುಗಳು ಹಣ ಬಿಸಾಡಿದರೆ ಮಂಚಕ್ಕೆ ಬಂದು ಬೀಳುತ್ತವೆ. ಏನೋ ಕುತಂತ್ರ ನಡೆದಿದೆ ಎಂದು ಕಾಳವ್ವನ ಮೇಲೆ ರೇಗಾಡುವನು. ಇಬ್ಬರ ಪರ ಮಾತನಾಡಿದರೂ ಮಾಬು ಸೂಗನಗೌಡನನ್ನು ಆರಿಸಿಕೊಂಡಳು. ಆದರೆ ಸೂಗನಗೌಡನ ಮೇಲಿನ ಕೋಪಕ್ಕಾಗಿ ಮತ್ತು ಕೀಳುಕುಲದ ಮಾಬಿಯ ಕೂಡ ಉಡುಗೊರೆ ನೀಡಿಸಿದ್ದರ ಸಲುವಾಗಿ ಗಂಗಪ್ಪನಿಗೆ ತಾನು ಎಷ್ಟು ಪ್ರಯತ್ನಿಸಿದರು ಮಣಿಯಲಿಲ್ಲ. ಅಲ್ಲದೆ "ಆ ಸೊಟ್ ಮೋತಿ ಸಾವುಕಾರ್ನ ಕೂಡದಕ್ಕಿಂತ ಹೊಲೆಮಾದಿಗರ ಜತೆ ಮಲಗದು ಬೇಸು, ಅಂದ್ಲು ಆ, ರಂಡೆ ಮಾಬಿ"[೩] ಅಂತ ಹೇಳಿದಳೆಂದು ಕಾಳವ್ವನ ಒಂದು ಸುಳ್ಳಿನ ಮಾತು ಅವನ ಸ್ವಾಭಿಮಾನ ಪ್ರಶ್ನೆಯಾಗಿ ಕೆರಳಿಸಿ ನಿಲ್ಲುತ್ತದೆ. ಅದು ಮಾಬಿ ಬದುಕನ್ನು ಸರ್ವನಾಶ

ಮಾಡದೆ ಬಿಡುವುದಿಲ್ಲ. ಶಪತದೊಂದಿಗೆ ದ್ವೇಷದ ಜ್ವಾಲೆ ಪ್ರಾರಂಭವಾಗುತ್ತದೆ. ಏನು ತಪ್ಪು ಮಾಡದ ಮಾಬಿಯ ಬದುಕು ಸಂಕಷ್ಟಕ್ಕೆ ದೂಡುವುದು ಮತ್ತು ದಾಯಾದಿತನ ಪ್ರಚೋದನೆಗೆ ನಾಂದಿಯಾಗುವ ದುರಂತದ ಸಂಗತಿ ಈ ಕಾದಂಬರಿ ಒಡಲಿನಲ್ಲಿ ಅನಾವರಣಗೊಂಡಿದೆ.

**ದಾಯಾದಿಗಳ ಹಗೆತನ**

ಇಡೀ ಮಾನವ ಸಂಕುಲದ ಸಾಮಾಜಿಕ ವ್ಯವಸ್ಥೆಯಲ್ಲಿ ಮನುಷ್ಯ ಒಂದಲ್ಲ ಒಂದು ಕಾರಣಕ್ಕಾಗಿ ದ್ವೇಷ, ಅಸೂಯೆ ಪಡುತ್ತಲೇ ಇರುವಂತದಾಗಿದೆ. ಅದು ಸಹಸ್ರಾರು ವರ್ಷದ ಚರಿತ್ರೆ ಪುಟಗಳು ತಿರುವಿ ನೋಡಿದಾಗ ಹೆಣ್ಣು ಮತ್ತು ಸಂಪತ್ತಿಗಾಗಿ ಸಂಘರ್ಷದ ಹಣಾಹಣಿಗಳು ನಡೆದಿರುದಂತಹದ್ದು. ಇನ್ನೊಂದು ಕಡೆಗೆ ತಮಗಿಂತ ಮೇಲೆತ್ತರಕ್ಕೆ ಬೆಳೆಯಬಾರದು ಎಂಬ ಕೀಳರಿಮೆ, ಮತ್ಸರಭಾವನೆ ಬೆಳೆಯುವುದು ಕಾಣುತ್ತದೆ. ಸನಾತನವಾದಿ ಮನಸ್ಸುಗಳು ತಮಗಿಂತ ಕೆಳಗಿರಬೇಕೆಂಬ ಜಲಸಿ ಇನ್ನೊಬ್ಬರ ಅಭಿವೃದ್ಧಿ ಸಹಿಸದ ಮನಸ್ಥಿತಿ ಕೆಲವೊಬ್ಬರಲ್ಲಿ ಕಾಣುತ್ತದೆ. ಇಂತಹ ನಿಕೃಷ್ಟ ಮನಸ್ಥಿತಿಯವರನ್ನು ವಾಸ್ತದ ಬದುಕಿನಲ್ಲಿ ಕಾಣುತ್ತೇವೆ.

ಮಾಬಿ ಸೂಗನಗೌಡನ ಮನೆ ಸೇರಿದ ಮೇಲೆ ಬೂದಿ ಮುಚ್ಚಿದ ಕೆಂಡದಂತೆ ಇದ್ದ ಮನೆತನದ ಹಗೆತನ ತಿಳಿಗೊಂಡಿತು. ಅದೇನೆಂದರೆ ಅವರ ಮನೆತನದ ಹಿರಿಯರು ಹೊಲದ ಬದುವಿಗಾಗಿ ಜಗಳವಾಗಿ ಕೋರ್ಟ್ ಕಛೇರಿ ಅಲೆದು ನ್ಯಾಯ ಪೋಲಿಸ ಗೌಡರ ಪರವಾಗಿ ತಣ್ಣಗಾಗಿತು. ಅದು ಈಗ ಹತ್ತಿ ಉರಿಯಲು ಪ್ರಾರಂಭವಾಗಿದೆ. ಗಂಗಪ್ಪ ಸಾಹುಕಾರ ಸಣ್ಣಪುಟ್ಟ ನೆಪ ಮುಂದಿಟ್ಟು ಸೂಗನಗೌಡನ ಮೇಲೆ ಸೇಡು ತೀರಿಸಿಕೊಳ್ಳಲು ತೊಡಗುತ್ತಾನೆ. ಅದಕ್ಕೆ ಪ್ರತಿಯಾಗಿ ಸೂಗನಗೌಡ ನಿಲ್ಲುತ್ತಾನೆ. ಇದರಿಂದ ಊರಿನ ನೆಮ್ಮದಿ ಹಾಳಾಗುತ್ತದೆ. ಇವರ ಹಣ ಹಾಳಾದರೆ ಗಳಿಸಬಹುದು. ಆದರೆ ಕದಡಿದ ಊರ ನೆಮ್ಮದಿ ಸರಿ ಮಾಡುವುದು ಸಾಧ್ಯವಿಲ್ಲದ್ದಾಗಿದೆ. ಊರಿನಲ್ಲಿ ನಡೆಯುವ ಹಬ್ಬ, ಪೂಜೆ, ಉತ್ಸವ, ಧರ್ಮಕಾರ್ಯಗಳು ಎರಡೆರಡು ನಡೆದವು. ಪ್ರತಿಯೊಂದಕ್ಕೂ ಅಡ್ಡಿ, ಆತಂಕ, ಅವಗಡಗಳು, ಕೊಲೆ, ಸುಲಿಗೆ, ನೋವಿನ ಪರಿಣಾಮ ಕೆಳವರ್ಗದವರು ಅನುಭವಿಸುವ ಸಂಕಷ್ಟವನ್ನು ಅನಾವರಣಗೊಳಿಸಿದೆ.

**ಮಾಬಿಯ ವ್ಯಕ್ತಿತ್ವ**

ಭಾರತೀಯ ಸನಾತನವಾದಿ ಪುರೋಹಿತಶಾಹಿ ವ್ಯವಸ್ಥೆ ನಸ್ತ್ರೀಸ್ವಾತಂತ್ರಂ ಎಂದು ಹೆಣ್ಣನ್ನು ನಾಲ್ಕು ಗೋಡೆಗಳ ಮಧ್ಯೆ ಇಟ್ಟು ಶೋಷಣೆ ಮಾಡುವುದು ಕಾಣುತ್ತದೆ. ಅಲ್ಲಿ ತಳಸಮುದಾಯದ ಹೆಣ್ಣನ್ನು ಇನ್ನೂ ಕೆಳಸ್ತರದಲ್ಲಿ ನೋಡುವುದು ನಮಗೆ ತೋರುತ್ತದೆ. ಅಲ್ಲದೆ ಸ್ತ್ರೀಯನ್ನು ದ್ವಿತಿಯ ದರ್ಜೆಯವಳಾಗಿ ಈ ಸಾಮಾಜಿಕ ವ್ಯವಸ್ಥೆ ಗುರುತಿಸಿ ಅವಳಿಗೆ ಸ್ವಾತಂತ್ರ ನೀಡಿಲ್ಲ. ಪುರುಷ ಅಧೀನತೆಯಲ್ಲಿ ಬದುಕುವಂತೆ ವ್ಯವಸ್ಥೆ ರೂಪಿಸಲಾಗಿದೆ. ಆದರೂ ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲೂ ಕೆಲವು ವಿಶಿಷ್ಟ, ಉತ್ತಮ, ವ್ಯಕ್ತಿತ್ವವಿರುವ ಸ್ತ್ರೀಯರನ್ನು ಸಹ ಕಾಣುತ್ತವೆ.

ದಲಿತ ವರ್ಗದಲ್ಲಿ ಅರಳಿನಿಂತ ಉತ್ತಮ ವ್ಯಕ್ತಿತ್ವವುಳ್ಳ ಮಾಬು ಸೂಗನಗೌಡನ 'ಖಾಯಂ' ಹೆಣ್ಣಾಗಿ ಮನೆ ಸೇರಿದಳು. ಇವಳಿಗೆ ಬೇಕಾದದ್ದು ಬದುಕಿಗೆ ಉತ್ತಮ ನೆಲೆ ಮತ್ತು ಗೌರವಾನ್ವಿತ ಜೀವನ. ಅವಳಿಗೆ ಹಣ, ಅಂತಸ್ತು, ಪ್ರತಿಷ್ಠೆ ಯಾವುದೂ ಮುಖ್ಯವಾಗಿರುವುದಿಲ್ಲ. ಇವಳು ಬಂದು ಕೆಲವು ದಿನ ಗತಿಸಿದರೂ ಸುಸಂಸ್ಕೃತಳಾದ ಪಾರ್ವತಿ ನೋಡಿರುವುದಿಲ್ಲ. ಮಾಬಿ ಹತ್ತಿರ ಬಂದ ಸಮಯದಲ್ಲಿ ಮಾಬಿ ಅಸಹಾಯಕತೆಯಿಂದ ಸೂಳೆಯಾಗಿ ಬಂದವಳು, ಅಲ್ಲದೆ ದಿಕ್ಕು, ಅಸ್ತಿತ್ವವಿಲ್ಲದವಳು, ದೂರತಳ್ಳಬೇಡವೆಂದು ದೈನ್ಯದಿಂದ ಬೇಡಿದಳು. ಹೈದರಾಬಾದ್ ಕರ್ನಾಟಕದ ಜಮೀನ್ದಾರರು ಹೆಂಡತಿ ಇದ್ದರೂ ಸೂಳೆ ಇಡುವುದು ಪ್ರತಿಷ್ಠೆಯ ಸಂಕೇತವಾಗಿದೆ. ಅವರ ಹಾದರತನ, ಚಟ ಮರೆಮಾಚಿದೆ. ಇಲ್ಲಿ ಪುರುಷತ್ವ ಮೆರೆದು ಹೆಣ್ಣಿನ ಅಸ್ತಿತ್ವ ಗೌಣವಾಗಿದೆ. ಇದರಿಂದ ಪಾರ್ವತಿ "ಹಾಂಗ್ಯಾಕಂತಿ ಮಾಬಮ್ಮ ಯಾಕ ಸಿಟ್ಟಾಗ್ಲಿ? ಸೂಳ್ಯಾಗ್ಲಿ, ಗರ್ತ್ಯಾಗ್ಲಿ ಹೆಂಗಸರ ಹಣೇಬಾರ ಒಂದೇ; ಗಂಡಸ್ಸು ಹೇಳಿದಂಗ ಕೇಳಿ ಬಿದ್ದಿರದು!"[೪] ಎಂದು ನಿರೂಪಿಸಿದ್ದಾರೆ. ಇಲ್ಲಿ ಹೆಣ್ಣಿನ ವಿರೋಧಭಾವವಿದೆ. ಅದಕ್ಕಾಗಿ ಇಬ್ಬರು ಸಮಾನ ಮನಸ್ಥಿತಿ ಹೊಂದಿದ್ದರಿಂದ ಪಾರ್ವತಿ ಸವತಿಯಂತೆ ಕಾಣದೆ ತಂಗಿಯಾಗಿ ಮಾಬಿಯನ್ನು ಕಾಣುವಂತಹ ಉದಾರ ಮನೋಭಾವನೆ ಕಾಣುತ್ತದೆ.

**ಮಾಬಿ ಸಣ್ಣಗೌಡಸಾನಿಯಾಗಿ ಪರಿವರ್ತನೆ**

ಜಮೀನ್ದಾರ ಸೂಗನಗೌಡನ ಮನೆ ಸೇರಿದ ಮಾಬಿ ನಿಸ್ವಾರ್ಥಿ, ಬುದ್ಧಿಜೀವಿ, ಸುಸಂಸ್ಕೃತಳು, ಅಲ್ಲದೆ ಸಂಕಷ್ಟದಲ್ಲಿ ಬೆಳದಿದ್ದರಿಂದ ದಲಿತರ ನೋವು, ಕಷ್ಟಕಾರ್ಪಣ್ಯಗಳ ಅರಿವು ಇದ್ದದ್ದರಿಂದಲೂ ಊರಿನ ಜನಸಾಮಾನ್ಯರ ನೋವಿಗೆ ಸ್ಪಂದಿಸುವ ಕೆಲಸಕಾರ್ಯಗಳನ್ನು ಮಾಡುತ್ತಾಳೆ. ಮಾದರ ಮಾರ್ಯ ಕಾರಹುಣ್ಣಿಮೆ ದಿನ ಕುಡಿದು ಸಾವುಕಾರನ ಮಾತು ಕೇಳಿ ಗೌಡನ ವಿರುದ್ಧ ಕೂಗಾಡಿದ ಕಾರಣಕ್ಕಾಗಿ ಗೌಡ, ಗುರುಬಸಪ್ಪ ಸಾಲ ಕೊಡುವಂತೆ ಒತ್ತಾಯ ಹೇರುತ್ತಾರೆ. ಇವನು ಆರ್ಥಿಕ ಅಸಮಾನತೆಯಿಂದ ದೈನ್ಯದಿಂದ ಬೇಡಿದರೂ. ಸಾವುಕಾರ ಹತ್ತಿರ ತರುವಂತೆ ಒತ್ತಡ ಹೇರುತ್ತಾರೆ. ಅವನು ತನ್ನ ಅಳಲನ್ನು ತೋಡುವ ಸಂದರ್ಭದಲ್ಲಿ ಮಾಬು "ಇಂಥವ್ರಿಗಲ್ದೆ ದಯಾ ಎಂತವ್ರಿಗೆ ತೋರಿಸ್‌ಬೇಕಣ್ಣಾ? ಬಡವ್ರು, ಹೊಟ್ಟೆ ತಿಪ್ಲಿಗೆ ಏನನ ಮಾಡ್ತವ; ಅವ್ರ ಕಷ್ಟ ಆವ್ರಿಗೇ ಗೋತ್ತು"[೫] ಎಂದು ಹೇಳಿ ಪಾರು ಮಾಡಿದಳು ಮತ್ತು ಬುದ್ಧಿ ಹೇಳಿ ದಾನ ನೀಡಿ ಉದಾರತೆ ಮೆರೆದಳು. ಮಾರ್ಯ ಭಾವುಕನಾಗಿ ತನ್ನ ಕಷ್ಟಕ್ಕೆ ಸ್ಪಂದಿಸಿ ಮಾನ ಉಳಿಸಿದಳು "ಸಣ್ಣಗೌಡಸಾನಿ" ಎಂದು ಹೊಗಳಿದ್ದಾನೆ.

**ಗಂಗಪ್ಪನಿಂದ ಮಾಬಿಗೆ ಒದಗುವ ಅಪಾಯದ ಸೂಚನೆ**

ಹೈದರಾಬಾದ್ ಕರ್ನಾಟಕದ ಸಾಂಸ್ಕೃತಿಕ ಹಬ್ಬಗಳಲ್ಲಿ ಗೌರಿಹುಣ್ಣಿಮೆ ಒಂದು ವಿಶಿಷ್ಟ ಹಬ್ಬ. ಈ ದಿನ ಗೌರಿ ಕೂಡಿಸಿ ಊರಿನ ಹೆಂಗಸರೆಲ್ಲ ಸೇರಿ ಆಚರಿಸುವಂತಹ ಹಬ್ಬವಾಗಿದೆ.

ಊರಿನಲ್ಲಿ ಏನೇ ಹಬ್ಬ ಕಾರ್ಯಗಳು ನಡೆದರು ಜಮೀನ್ದಾರರ ಹೆಂಗಸರು ಬರುತ್ತಿರಲಿಲ್ಲ. ಆದರೆ ಈ ಹಬ್ಬಕ್ಕೆ ಎಲ್ಲರೂ ಬಂದಿದ್ದರೂ ಮರಿಯಮ್ಮನ ಗಂಡನಾದ ಸನಾತವಾದಿ ಗಂಗಪ್ಪನ ಕ್ರೂರತ್ವ ಮನಸ್ಸನ್ನು ಅರಿತಿದ್ದಳು. ಮಾಬಿ ಸುಸಂಸ್ಕೃತ ವ್ಯಕ್ತಿತ್ವ, ಹೃದಯ ವೈಶಾಲ್ಯತೆ, ಜನಸಾಮಾನ್ಯರ ಕಷ್ಟಕ್ಕಾಗುವ ಔದಾರ್ಯತೆ ಅರಿತ ಕಾರಣ ಅವಳು ಗಂಡನ ಕುತಂತ್ರಗಳು ಕ್ರೂರತ್ವಕ್ಕೆ ಬಲಿಯಾಗುವ ಸೂಚನೆ ಕಂಡ ಕಾರಣ ಅವಳನ್ನು ಮಗ್ಗಲಿಗೆ ಕರೆದು ಜಾಗೃತವಾಗಿರುವಂತೆ ಸೂಚಿಸುತ್ತಾಳೆ. ಇಲ್ಲಿ ಕಟುತ್ವ, ಕೆಟ್ಟತನಕ್ಕೆ ಒಳ್ಳೆಯತನ ಸಾಯಬಾರದು ಎಂಬುದನ್ನು ಲೇಖಕ ಸೂಕ್ಷ್ಮವಾಗಿ ಗ್ರಹಿಸಿದ್ದಾರೆ.

**ತಾಯ್ತತನದ ಪ್ರೀತಿ**

ಪ್ರತಿಯೊಂದು ಮನುಷ್ಯತ್ವ ಇರುವ ವ್ಯಕ್ತಿಯಲ್ಲಿ ಪ್ರೀತಿ ಇದ್ದೆ ಇರುತ್ತದೆ. ಆದರೆ ತಾಯ್ತತನದ ಪ್ರೀತಿಗೆ ವಿಶಿಷ್ಟ ಸ್ಥಾನವಿದೆ. ಅದು ನಿಸ್ವಾರ್ಥ, ನಿಷ್ಕಲ್ಮಶವಾದದ್ದಾಗಿರುತ್ತದೆ. ಅದು ಹೆತ್ತ ತಾಯಿಂದ ಕೊಡಲು ಮಾತ್ರ ಸಾಧ್ಯ ಆದರೆ ಮಾಬು ಅಂತಹ ವ್ಯಕ್ತಿತ್ವಕ್ಕೆ ಹತ್ತಿರದವಳಾಗಿದ್ದಾಳೆ. ಅಕ್ಕ ಪಾರ್ವತಿ ಹಡೆದು ಸತ್ತ ಮೇಲೆ ಅವಳು ಸ್ವಂತ ಮಗನಂತೆ ಭೀಮನಗೌಡನನ್ನು ಪೋಷಿಸುತ್ತಾಳೆ. ಅಲ್ಲದೇ ಮಮತೆ, ಪ್ರೀತಿ, ವಾತ್ಸಲ್ಯ ಧಾರೆಯೆರೆದು ಹೆತ್ತಮಗನಿಗಿಂತ ಹೆಚ್ಚಾಗಿ ಸಾಕುತ್ತಾಳೆ. ಇಂತಹ ಮನಸ್ಥಿತಿ ಸಮಾಜಕ್ಕೆ ಅವಶ್ಯಕ ಎಂಬುದನ್ನು ಇಲ್ಲಿ ಅನಾವರಣಗೊಳಿಸಲಾಗಿದೆ. ಅಲ್ಲದೆ ಕುರುಬರ ಶಂಕ್ರಪ್ಪನ ಸೊಸೆ ಚೊಚ್ಚಲ ಬಸರಿ ಮೂರುದಿನ ಬೇನೆ ತಿಂದು ಹಡೆದಿರಲಿಲ್ಲದ ಸಂಗತಿ ತಿಳಿದು ಬಂದ ಮಾಬಿ "ಹೆಜ್ಜೆ ಕಿತ್ತದ ನೀರು ಕುಡಿಸಿದ್ರ ಕೊಡ್ಲೇ ಹಡಿತಾರ, ಅದನ್ಯಾಕ ಮಾಡಬಾರ್ದು!"[೬] ಎಂದು ಹೇಳಿದ ಮಾತಿಗೆ ಊರಿನವರೆಲ್ಲರು ಗಂಡು-ಹೆಣ್ಣು ಎನ್ನದೆ ಸಾಲಾಗಿ ನಿಂತು ಬಾವಿ ನೀರು ಸೇದಿ, ಕೂಡಿಸಿದರು. ಒಂದು ತಾಸಿನಲ್ಲಿ ಹೆರಿಗೆಯಾಗಿ ತಾಯಿಮಗು ಜೀವ ಉಳಿಸಿದಳು. ಅದಕ್ಕೆ ಮಾಬು ಊರಿನ ಕಣ್ಮಣಿಯಾದಳು.

ಕಾಳವ್ವನ ತಂಗಿಗೆ ಹೊಟ್ಟೆಯಲ್ಲಿ ಹುಣ್ಣಾಗಿತ್ತು. ಅದಕ್ಕಾಗಿ ವೈದ್ಯರು ಒಂದು ತಿಂಗಳು ಆಕಳ ಹಾಲು ಕೂಡಿಸುವಂತೆ ಹೇಳಿದರು. ಗಂಗಪ್ಪನ ಮನೆ, ಸಂತೆ, ಬೇರೆ ಬೇರೆ ಕಡೆಗಳಲ್ಲಿ ಅಲೆದರೂ ಸಿಗದ ಸಂದರ್ಭದಲ್ಲಿ ಮಾಬು ಆಕಳು ಕರುವಿನೊಂದಿಗೆ ಅವಳ ಮನೆಗೆ ಕೊಟ್ಟು ಕಳಿಸಿದಳು. ಒಬ್ಬರ ಕಷ್ಟಕ್ಕೆ ಒಬ್ಬರು ಆಗಬೇಕು ಎಂದು ಉದಾರತೆಯನ್ನು ಮೆರೆದ ಮಾಬುವಿನ ಮೇಲೆ ದ್ವೇಷ ಸಾಧಿಸಿದ ಕಾಳವ್ವ ಪರಿವರ್ತನೆಯಾಗಿ ಮಾಡಿದ ತಪ್ಪಿಗೆ ಪರಿತಪಿಸಿ ಪಶ್ಚಾತ್ತಾಪ ಪಡುತ್ತಾಳೆ.

ದಲಿತರು, ಬಡವರು, ಸಾಮಾನ್ಯರು, ಬೆಳೆ ಇರದ ಕಾರಣ ಹೊಟ್ಟೆಗೆ ಕಾಳು ಇಲ್ಲವೆಂದು ಗೋಳು ಹೇಳಿ ಬೇಡಿದಾಗ ಗೌಡನ ಒಪ್ಪಿಗೆ ಪಡೆದು 'ಹಗೆ' ತೆಗಿಸಿ ಜೋಳದ ಧಾನ್ಯವನ್ನು ಹಂಚುತ್ತಾಳೆ.

ಹೀಗೆ ಮಾಬು ಊರಿನಲ್ಲಿ ಏನೇ ಸಮಸ್ಯೆಗೆ ಸಹಾಯ ಬೇಡಿ ಬಂದವರಿಗೆ ನಿರಾಸೆ ಮಾಡುತ್ತಿರಲಿಲ್ಲ. ಇವಳ ಔದಾರ್ಯ, ಕರುಣೆ ಅರಿತ ಗೌಡ ಯಾವುದಕ್ಕೂ ಅಡ್ಡಿಪಡಿಸಲಿಲ್ಲ. ಅಲ್ಲದೇ ಸುಸಂಸ್ಕೃತ ತಂದೆ ಆಶ್ರಯದಲ್ಲಿ ಬೆಳೆದ ಪರಿಸರ, ಜ್ಞಾನ, ಅರಿವು ಸಮಾಜಮುಖಿ ಚಿಂತನೆ, ಕೆಳವರ್ಗದ, ಸ್ವಾನುಭವ, ಬಡವರ ನೋವು, ಬವಣೆ, ಹತಾಶೆ, ಅರಿವು ಇರುವುದರಿಂದ ಅವುಗಳಿಗೆ ಸ್ಪಂದಿಸುವ ಮನಸ್ಸು ಆದರ್ಶ, ಕರುಣೆ, ಉದಾರತೆ, ಸಹಾಯ ಮನೋಭಾವನೆ ಗುಣಗಳಲ್ಲಿ ತುಂಬಿದ ಹೆಣ್ಣಾಗಿದ್ದಾಳೆ. ಇವಳು ತಳಸಮುದಾಯದ ಹೆಣ್ಣಾದರೂ ಮಾನವೀಯ ಗುಣದಲ್ಲಿ ಉತ್ತುಂಗ ಮಟ್ಟದಲ್ಲಿ ನಿಲ್ಲುತ್ತಾಳೆ. ಇದನ್ನು ಹೊಗಳಿಕೆಗಾಗಿ ಲೇಖಕರು ಸೃಷ್ಟಿಸಿಲ್ಲ. ಇದೊಂದು ವಾಸ್ತವದ ಹೆಣ್ಣಿನ ವ್ಯಕ್ತಿತ್ವದ ಸಂಗತಿಯನ್ನು ಈ ಕಾದಂಬರಿಯಲ್ಲಿ ಅನಾವರಣಗೊಳಿಸುವ ಮೂಲಕ ಅದರ ಸತ್ವವನ್ನು ಎತ್ತಿತೋರಿಸಿದ್ದಾರೆ.

**ಜಾತಿವ್ಯವಸ್ಥೆ**

ಶತ-ಶತಮಾನಗಳಿಂದ ಪರೋಹಿತಶಾಹಿ ವರ್ಗ, ಉನ್ನತ ವರ್ಗಗಳು ವೇದಗಳ ಜೊತೆ ಜೊತೆಯಲ್ಲಿಯೇ ಶ್ರೇಣೀಕೃತ ವ್ಯವಸ್ಥೆಯನ್ನು ಶೂದ್ರ ಬೀಜವಾಗಿ ಉದ್ಭವಿಸಿದೆ. ಆ ಬೀಜ ಪ್ರಸ್ತುತ ಸಮಾಜದಲ್ಲಿ ಮೊಳಕೆಯೊಡೆದು ಹೆಮ್ಮರವಾಗಿ ಸಾವಿರಾರು ಜಾತಿಯ ರೆಂಬೆಗಳಾಗಿ ಚಾಚಿಕೊಂಡಿದೆ. ಅದು ತಳಸಮುದಾಯಗಳಾದ ಹೊಲೆ, ಮಾದಿಗ ಅದಿಮ ವರ್ಗಗಳನ್ನು ಕೆಳಸ್ತರದಲ್ಲಿ ಇಟ್ಟು ನಿಕೃಷ್ಟವಾಗಿ ಕಾಣುತ್ತದೆ. ಅಲ್ಲದೆ, ಅವರಿಗೆ ಮೂಲಭೂತ ಸೌಕರ್ಯ ಭೂಮಿ, ಶಿಕ್ಷೆಗೆ ದೊರೆಯದ ಹಾಗೆ ಮಾಡಿ ಕೆಳಸ್ತರದಲ್ಲಿ ಇಟ್ಟಿದ್ದಾರೆ. ಅದಕ್ಕಾಗಿ ಇವರು ಜೀತ, ಕೀಳುವೃತ್ತಿ ಮಾಡುತ್ತ ಸ್ವತಂತ್ರ ಅಸ್ತಿತ್ವವಿಲ್ಲದೆ ಉನ್ನತ ವರ್ಗವನ್ನು ಅನುಸರಿಸಿ ಬದುಕುವಂತಹುದನ್ನು ಕಾಣುತ್ತೇವೆ.

ಅದೇ ರೀತಿಯಾಗಿ ಕಾದಂಬರಿಯಲ್ಲಿ ನಿರೂಪಣೆಯಾದ ಹೈದರಾಬಾದ್ ಕರ್ನಾಟಕ ಫ್ಯೂಡಲ್‌ಗಳು ಹೊರತಾಗಿಲ್ಲ. ಇಲ್ಲಿ ಪ್ರತಿಯೊಬ್ಬರ ಮನೆಯಲ್ಲಿ ಜೀತಪದ್ಧತಿಯಿದೆ. ಮಾದಿಗ, ಹೊಲೆಯ, ತಳವಾರ, ಅಗಸ, ಜೀರ ಎಂಬ ಹೆಸರುಗಳೇ ತಳವರ್ಗ ಸ್ಥಿತಿಯನ್ನು ಗುರುತಿಸುತ್ತದೆ. ಹೊಲೆಮಾದಿಗರು ಊರಿನಲ್ಲಿ ಹೊಲಸು ಎತ್ತಿಹಾಕುವುದು, ಕಾರಹುಣ್ಣಿಮೆ ದಿನ ಅಗಸಿ ಮುಂದಿನ ಕಸಗುಡಿಸುವುದು, ತಳವಾರ ಸೋಮ ಡಂಗುರ ಸಾರುವುದನ್ನು ಕಾಣುತ್ತೇವೆ. ತಳಸಮುದಾಯದ ಹೆಣ್ಣು ಭೋಗದ ವಸ್ತುವಾಗಿ ಪ್ರತಿರೂಪಿತವಾಗಿದೆ. ಜಾತಿಗೇರ ಮಾಬಿ, ಮಾದರ ಬಸ್ವಿ, ರಾಮನಿಂಗಿ ಉನ್ನತವರ್ಗದ ಹಾದರತನದ ಚಟಕ್ಕೆ ಬಳಸುವುದಾಗಿದೆ. ಅಲ್ಲಿ ಲಿಂಗ ಅಸಮಾನತೆ ಕಾಣುತ್ತದೆ. ಕೀಳುಕುಲದ ಹೆಣ್ಣನ್ನು ಹಾದರತನಕ್ಕೆ ಬಳಸುವಾಗ ಮೇಲುಜಾತಿಯವರಿಗೆ ಜಾತಿ ಅಡ್ಡ ಬರಲಿಲ್ಲ. ಆದರೆ "ಆ ಸೊಟ್ಟಮೋತಿ ಸಾವುಕಾರ ಕೂಡುವುದಕ್ಕಿಂತ ಹೊಲೆ ಮಾದಿಗರ ಜತೆ ಮಲಗುವುದ ಬೇಸು"[೭] ಅಂದಳು ಎಂದು ಕಾಳವ್ವ ಹೇಳಿದ ಸುಳ್ಳು ಮಾತು ಜಾತಿ ಪ್ರಶ್ನೆಯಾಗಿ ಅವನ ಸ್ವಾಭಿಮಾನ ಕೆರಳಿಸಿದಂತದಾಗಿದೆ. ಅಲ್ಲದೆ ಉನ್ನತವರ್ಗ ತಳವರ್ಗದ

ಹೆಣ್ಣನ್ನು ಭೋಗದ ವಸ್ತುವಾಗಿ ಬಳಸಿದರೆ ಅದು ಪ್ರತಿಷ್ಠೆತನದ ಸಂಕೇತ. ಆದರೆ ಕೀಳುವರ್ಗದ ಮನೆಯಲ್ಲಿ ತಿನ್ನುವುದು ತಪ್ಪಾಗಿ ಕಂಡು ಜಾತಿಯ ಅಸಮಾನತೆಯ ಪ್ರಶ್ನೆ ಎತ್ತುವುದನ್ನು ಗುರುತಿಸುತ್ತದೆ.

ಕಾರಹುಣ್ಣಿಮೆ ದಿನ ಸಾವುಕಾರ ಮಾತು ಕೇಳಿ ಸೂಗನಗೌಡನ ವಿರುದ್ಧ ತುಚ್ಛವಾಗಿ ಕೂಗಾಡಿದ್ದಕ್ಕಾಗಿ ಮಾದರ ಮಾರ್‍ಯನಿಗೆ ಗುರುಬಸಪ್ಪ "ಉಪಕಾರಿಲ್ದ್ ಜಾತಿ ಮೊದಲು ಅಸಲು ಬಡ್ಡಿ ಎಡ್ರೂ ಇಟ್ ಮಾತಾಡು"[೮] ಎನ್ನುವಂತಹ ಜಾತಿ ಕಿನ್ನತೆಯನ್ನ ಗುರುತಿಸುತ್ತದೆ. ಅಲ್ಲದೆ ಗೌರಿಹುಣ್ಣಿಮೆ ದಿನ ಮರೆಮ್ಮ ಗಂಡನಿಂದ ಒದಗುವ ಅಪಾಯ ಹೇಳಿ ಎಚ್ಚರಿಸುವುದು ಕಂಡು ಮೈದುನನ ಹೆಂಡತಿ ನಾಗಮ್ಮ "ಜಾತಿಗೇರವಳ ಜತಿಗೆ ಎನ್ ಮಾತಕ್ಕಾ"[೯] ತಾನೊಂದು ಹೆಣ್ಣಾಗಿದ್ದರೂ ಕೀಳು ಕುಲದವಳು ಎಂಬ ಭಾವನೆ ವ್ಯಕ್ತಪಡಿಸುವ ಮೂಲಕ ಜಾತಿ ಶೋಷಣೆ ಕಾಣುತ್ತದೆ.

ಸೂಗನಗೌಡನ ಮೆಚ್ಚಿ ಖಾಯಂ ಸೂಳೆಯಾಗಿ ಬಂದ ಮಾಬಿ ತಳಸಮುದಾಯದವಳು. ಅದಕ್ಕಾಗಿ ಲಿಂಗಾಯತ ಪ್ರತಿಷ್ಠಿತ ವರ್ಗವಾದ ಕಾರಣ ದೇವರ, ಅಡುಗೆ ಮನೆಗೆ ಸೇರಿಸುತ್ತಿರಲಿಲ್ಲ. ಕಾಲಾಂತರದಲ್ಲಿ ಮನೆಯವರ ವಿಶ್ವಾಸ, ತನ್ನದೆಂಬ ಭಾವನೆ ಬೆಳೆದ ಮೇಲೆ ಪ್ರವೇಶಿಸಿದ್ದಳು ಇದನ್ನು ಮಠದ ಜಂಗಮರು ಲಿಂಗಾಯತ ವರ್ಗ ಸಹಿಸದೆ ವಿರೋಧಿಸುವುದು ಕಂಡುಬರುತ್ತದೆ. ತಳ ಸಮುದಾಯಕ್ಕೆ ದೇಹಕ್ಕೆ ಹೊರೆದ ಚರ್ಮದಂತೆ ಜಾತಿ ಶೋಷಣೆ ಬೆನ್ನು ಬಿಡದೆ ಕಾಡುವುದನ್ನು ಇಲ್ಲಿ ಗುರುತಿಸಲಾಗಿದೆ.

ತಳಸಮುದಾಯಗಳು ಕೀಳು, ನಿಕೃಷ್ಟವೃತ್ತಿ ಮಾಡುತ್ತ ಉನ್ನತವರ್ಗದ ಕಾಲಾಳಾಗಿ ದುಡಿದ ಕಾರಣ ಜಾತಿ ಶ್ರೇಣೀಕರಣದ ಕೆಳಹಂತದಲ್ಲಿವೆ. ಅದಕ್ಕಾಗಿ ಆರ್ಥಿಕ ಸಂಕಷ್ಟ ಎದುರಿಸುತ್ತಾರೆ. ಅಲ್ಲದೆ ಸಂದರ್ಭೋಚಿತವಾಗಿ ಇವರನ್ನು ಬಲಿಪಶು ಮಾಡಿ ದಾಸ್ಯಕ್ಕೆ ನೂಕುವುದು ಜಾತಿ ಅಸಮಾನತೆಗೆ ಕಾರಣವಾಗಿದೆ ಎನ್ನುವಂತಹದನ್ನು ಗ್ರಹಿಸಲಾಗಿದೆ.

**ಹೈದರಾಬಾದ್ ಕರ್ನಾಟಕದ ಜಮೀನ್ದಾರ ಮಕ್ಕಳ ಶಿಕ್ಷಣ**

ಹೈದರಾಬಾದ್‌ಕರ್ನಾಟಕ ಪ್ರದೇಶಕ್ಕೆ ಸಂಬಂಧಿಸಿದ ಕಥೆ-ಕಾದಂಬರಿಗಳನ್ನು ಗಮನಿಸಿದರೆ ಜಮೀನ್ದಾರ ಮಕ್ಕಳು ವಿದ್ಯಾವಂತರಾಗುವುದಿಲ್ಲ. 'ಹಾಲುಜೇನು' ಕಾದಂಬರಿಯಲ್ಲಿ ಹೇಮಗಿರಿಯ ಮಗ ನಾಗನಗೌಡ ಓದಲು ಹೋಗಿ ವಿದ್ಯೆ ಕಲಿಯದೆ ಬರಿ ಹಣ ಖರ್ಚು ಮಾಡಿ ಓದು ಅರ್ಧಕ್ಕೆ ನಿಲ್ಲಿಸಿ ಬರುತ್ತಾನೆ. ಈ ಕಾದಂಬರಿಯಲ್ಲಿ ಗಂಗಪ್ಪ ಸಾವುಕಾರನ ಮಗ ಆದೆಪ್ಪ ಮತ್ತು ಸೂಗನಗೌಡ ಮಗ ಭೀಮನಗೌಡ ಅರ್ಧಮರ್ದ ಓದಿ ಅರ್ಧಕ್ಕೆ ಬಿಟ್ಟು ಮರಳಿ ಊರಿಗೆ ಬರುತ್ತಾರೆ. ಅಲ್ಲದೇ ಗೀತಾನಾಗಭೂಷಣ, ಚೆನ್ನಣ್ಣ ವಾಲೀಕಾರ ಕಾದಂಬರಿಗಳಲ್ಲಿಯೂ ಇಂಥವರು

ಸಿಗುತ್ತಾರೆ. ಸ್ವತಂತ್ರಪೂರ್ವದಲ್ಲಿ ಉಳ್ಳವರ ಮಕ್ಕಳು ವ್ಯವಸ್ಥಿತವಾಗಿ ಓದಿದವರ ಸಂಖ್ಯೆ ಕಮ್ಮಿ, ಓದದೇ ಇರುವುದಕ್ಕೆ ಹಣ, ಸಂಸ್ಕಾರ ಕಾರಣವಾಗಿದೆ. ಓದಿ ಸರಕಾರಿ ನೌಕರಿಯಿಂದ ಸಿಗುವ 'ಸಂಬಳ' ಅವರ ದೃಷ್ಟಿಯಲ್ಲಿ ಹಾಸ್ಯಾಸ್ಪದವೇ ಆಗಿತ್ತು ಎಂದು ಕಾಣುತ್ತದೆ. ಉಳ್ಳವರು ಒಂದು ವೇಳೆ ಮಕ್ಕಳನ್ನು ಓದಿಸಿದರೆ ವಕೀಲರನ್ನಾಗಿ ಮಾಡಬೇಕೆಂಬ ಆಸೆ ಹೊಂದಿರುತ್ತಿದ್ದರು. ಊರಲ್ಲಿ ತಾವು ಮಾಡುವ ಅನೇಕ ಕೊಲೆ, ಜಗಳಗಳಿಂದ ಮುಕ್ತರನ್ನಾಗಿ ಮಾಡಿಸಿಕೊಳ್ಳಲು ಬರುತ್ತಿತ್ತು. ಬ್ರಾಹ್ಮಣರು ಅದರಲ್ಲೂ ಜಮೀನ್ದಾರರು, ದೇಸಾಯಿ, ಕುಲಕರ್ಣಿ ತಮ್ಮ ಮಕ್ಕಳು ಓದಿಸಿ ಉನ್ನತ ಸ್ಥಾನವೆಂದೇ ಪರಿಗಣಿತವಾಗಿರುವ ಜಿಲ್ಲಾಧಿಕಾರಿ, ತಾಲ್ಲೂಕಾಧಿಕಾರಿಗಳನ್ನಾಗಿ ಮಾಡಿಸುವ ಗುರಿ ಹೊಂದಿರುತ್ತಿದ್ದರು. ಬಡ ಬ್ರಾಹ್ಮಣರ ಮಕ್ಕಳು ಓದಿಸಿ ಸಣ್ಣಪುಟ್ಟ ಸರಕಾರಿ ನೌಕರಿಗೆ ಸೇರಿಸುತ್ತಿದ್ದರು. ಇದಕ್ಕೆ ಸಾಹಿತ್ಯ ಕೃತಿಗಳಲ್ಲಿ ಉದಾಹರಣೆಗಳು ಸಿಗುತ್ತವೆ. ಈ ಮನೋಭಾವನೆಯಿಂದಲೇ ಈ ಪ್ರದೇಶ ಮುಂದುವರಿಯದಿರುವುದಕ್ಕೆ ಕಾರಣವಾಗಿದೆ ಎಂದೆನಿಸುತ್ತದೆ.

**ಗಂಗಪ್ಪನ ನಿಕೃಷ್ಟ ವ್ಯಕ್ತಿತ್ವ**

ಭೂಮಿ ಮೇಲಿನ ಪ್ರತಿಯೊಂದು ಜೀವಸಂಕುಲಕ್ಕೆ ತನ್ನದೇಯಾದ ವ್ಯಕ್ತಿತ್ವವಿರುತ್ತದೆ. ಅದರಲ್ಲಿ ಪ್ರೀತಿ, ಸ್ನೇಹ, ಮಮತೆ, ಹಟ, ಛಲ, ದ್ವೇಷ, ಅಸೂಯೆ ಪ್ರತಿಯೊಬ್ಬರಲ್ಲಿ ಇರುತ್ತದೆಯಾದರೂ ಯಾವುದೂ ಅತಿರೇಕಕ್ಕೆ ಹೋಗಬಾರದು. ಹೋದಂತಹ ಇಂತಹ ಸಂಗತಿಗಳು ರಾಮಾಯಣ, ಮಹಾಭಾರತ, ಪುರಾಣ, ಪುಣ್ಯಕಥೆಗಳಲ್ಲಿ ಕೆಲವು ಇಂತಹ ವ್ಯಕ್ತಿತ್ವ ಉಳ್ಳವರಾದ ರಾವಣ, ದುಶ್ಯಾಸನ, ವಿಶ್ವಾಮಿತ್ರ, ಶಕುನಿ, ಕಾಣುತ್ತಾರೆ. ಅಲ್ಲದೆ ಸಾಮಾಜಿಕ ವ್ಯವಸ್ಥೆಯಲ್ಲೂ ಸಹ ಇಂತಹ ವ್ಯಕ್ತಿತ್ವ ಉಳ್ಳವರು ಕಂಡುಬರುವರು. ಬಂಡವಾಳಶಾಹಿ, ರಾಜಕೀಯ ವ್ಯಕ್ತಿಗಳು, ಮಧ್ಯವರ್ತಿಗಳು, ಜನಸಾಮಾನ್ಯರು ಸ್ತ್ರೀಯರನ್ನು ಅಮಾನುಷವಾಗಿ ಶೋಷಣೆ ಮಾಡುತ್ತಿರುವಂತಹ ಸನಾತನವಾದಿ ಮನಸ್ಸುಗಳು ಈ ಸಾಮಾಜಿಕ ವ್ಯವಸ್ಥೆಯಲ್ಲಿ ತುಂಬಿರುವುದನ್ನು ಕಾಣುತ್ತೇವೆ.

ಇಂತಹ ಸನಾತನವಾದಿ ಮನಸ್ಸುಳ್ಳ ಗಂಗಪ್ಪ ಸಾವುಕಾರ ಗಂಗನಹಳ್ಳಿಯ ಉನ್ನತ ವರ್ಗದ ವ್ಯಕ್ತಿಯಾಗಿದ್ದಾನೆ. ಇವನು ಶ್ರೀಮಂತಿಕೆಯಲ್ಲಿ ಸೂಗನಗೌಡನ ಮನೆತನಕ್ಕಿಂತ ಹೆಚ್ಚು. ಆದರೆ, ಇವನಿಗೆ ಗೋಮುಖ ವ್ಯಾಘ್ರದಂತಹ ಮನಸ್ಥಿತಿ ಇರುವ ಕಾರಣ ಊರಿನವರು ಯಾರೂ ಇವನನ್ನು ಸೇರುತಿರಲಿಲ್ಲ ಅವನು ತನ್ನದೇ ಗುಂಪು ಕಟ್ಟಿಕೊಂಡು ಕೆಟ್ಟಕೆಲಸ ಮಾಡುತ್ತಿದ್ದನು. ಅಲ್ಲದೆ ಅವನಿಗೆ ಬೇಡವಾದದ್ದು ನೂರು ಜನರಿಗೆ ಒಪ್ಪಿತವಾಗಿದ್ದರೂ ತಿರುಗಿ ಸಹ ನೋಡುವವನಲ್ಲ. ವಿಚಿತ್ರ ಹಟ, ಹಾವಿನ ದ್ವೇಷ ತುಂಬಿಕೊಂಡವನು. ಸ್ತ್ರೀಯರನ್ನು ಮಂಚಕ್ಕೆ ಬರುವ ಭೋಗದ ವಸ್ತುವಾಗಿ ಬಗೆಯುವ ಕಲ್ಮಷ ಮನಸ್ಥಿತಿ ಅವನದಾಗಿದೆ.

ಇವನು ತಮ್ಮಂದಿರನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡು ದುಡಿತಕ್ಕಷ್ಟೇ ಅಷ್ಟೇ ಸೀಮಿತ ಮಾಡಿ ಮನೆಯ ಯಜಮಾನಿಕೆ ತಾನೇ ನಿರ್ವಹಿಸುತ್ತಿದ್ದನು. ಮನೆ ಹೆಣ್ಣುಮಕ್ಕಳನ್ನು ದಾಸ್ಯದಲ್ಲಿಟ್ಟು

ಹೊಸ್ತಿಲು ದಾಟದಂತೆ ನಿರ್ಬಂಧವೇರುತ್ತಾನೆ. ಇದಕ್ಕೆ? ತನ್ನ ಕೆಟ್ಟತನ ತಿಳಿದು ಸಂಸಾರ ಛಿದ್ರವಾಗಬಾರದು ಎಂಬ ಕಾರಣವಿದೆ. ಇದನ್ನರಿತ ಇವನ ಹೆಂಡತಿ ಸುಸಂಸ್ಕೃತಳಾದ ಮರೆಮ್ಮ ಇವನ ಕೆಟ್ಟತನ, ಮೋಸ, ಸೇಡು ಕಂಡು ಅದರ ಭಯದಿಂದ ಅವನಿಂದ ದೂರವಿರುತ್ತಾಳೆ.

ಮಾಬಿ ಗಂಗಪ್ಪನ್ನನ್ನು ತಿರಸ್ಕರಿಸಿ ದಾಯಾದಿ ಸೂಗನಗೌಡನ ಮನೆ ಸೇರಿದಳು. ಅಲ್ಲದೆ, ಕೀಳು ಕುಲದ ಸ್ಥಾನಕ್ಕಿಂತ ಕೀಳಾಗಿ ತನ್ನನ್ನು ಕಂಡಳು ಎಂದು ತಿಳಿದು ಅದು ತನ್ನ ಸ್ವಾಭಿಮಾನಕ್ಕೆ ಧಕ್ಕೆ ತಂದಿದೆ ಎಂದ ಅರಿತು ಇಡೀ ಅವಳ ಜೀವನ ಸರ್ವನಾಶ ಮಾಡುವರೆಗೆ ಕುತಂತ್ರ, ಹುನ್ನಾರ ರೂಪಿಸುವ ಕೆಟ್ಟತನದ ಕೃತ್ಯಗಳು ಅವನ ಕ್ರೂರತ್ವಕ್ಕೆ ಸಾಕ್ಷಿಯಾಗಿವೆ.

ಇವನು ಮನೆಯಲ್ಲಿ ತಮ್ಮಂದಿರು, ಹೆಂಡತಿ ಇಲ್ಲದ ಸಮಯದಲ್ಲಿ ಚಿಕ್ಕತಮ್ಮನ ಹೆಂಡತಿ ಶಿವಮ್ಮನ ಜೊತೆ 'ಅನೈತಿಕ' ಸಂಬಂಧವನ್ನು ಇಟ್ಟುಕೊಂಡಿದ್ದಾನೆ. ಮಗಳ ಸಮಾನಳಂತೆ ಕಾಣಬೇಕಾದ ಮಾವನೇ ಸೊಸೆಯನ್ನು ಭೋಗವಸ್ತುವಾಗಿ ಬಳಿಸಿಕೊಂಡ ವಿಕೃತ ಮನಸ್ಸಿನ ಹಾದರತನಕ್ಕೆ ಬಲಿಯಾಗಿವುದು ಅಮಾನುಷ ಸಂಗತಿಯಾಗಿದೆ. ಇವನ ಹೆಂಡತಿ ಮರೆಮ್ಮ ಈ ಕೃತ್ಯವನ್ನು ನೋಡುತ್ತಾಳೆ. ಇದರಿಂದ ತನ್ನ ಹಾದರತನ ಹೊರಬೀಳುತ್ತದೆ ಮತ್ತು ಕಾಯ್ದುಕೊಂಡು ಬಂದ ಸಂಸಾರ ಒಡೆಯುತ್ತದೆ. ಎಂದರಿತು ಹೆಂಡತಿಯನ್ನು ಹೊಡೆದು ಹಿಂಸಿಸಿ ನಿರ್ಬಂಧದಲ್ಲಿ ಇಡುತ್ತಾನೆ. ಇದರಿಂದ ಮನನೊಂದು ಮಗನನ್ನು ಮರೆತು ಬಸಿರುತನದಲ್ಲಿಯೇ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಇದಕ್ಕೆ ಇವನು ವ್ಯಥೆ ಪಡುವುದಿಲ್ಲ. ಕಾರಣ ಹಾದರತನ ಮುಚ್ಚುತ್ತದೆ. ಆದರೆ ಸಂಸಾರ ಹೊಡೆದು ಹೋಗುತ್ತದೆ. ಅದಕ್ಕಾಗಿ ಮಗನ ವಿದ್ಯಾಭ್ಯಾಸ ಬಿಡಿಸಿ ಮನೆಗೆ ಕರಿಸಿ ಜೀವನ ಸಾಗಿಸುತ್ತಾನೆ. ಊರಿನ ಯುವಕರ ಗುಂಪು ಸೇರಿ ಅನೇಕ ಪಂದ್ಯ, ನಾಟಕ ಆಡುವ ಸಂದರ್ಭದಲ್ಲಿ ಭೀಮನಗೌಡ ಮತ್ತು ಆದೆನಪ್ಪ ನಡುವೆ ಸ್ನೇಹ ಬೆಳೆಯುತ್ತದೆ. ಅದು ಗಂಗಪ್ಪನ ಕೆಟ್ಟತನಕ್ಕೆ ಒಂದು ಸುಸಂಧಿಯನ್ನು ಕೊಡುತ್ತದೆ. ಭೀಮನಗೌಡನನ್ನು ತನ್ನ ಸೇಡು ತಿರಿಸಿಕೊಳ್ಳವ ಸಲುವಾಗಿ ಅಸ್ತ್ರವಾಗಿ ಬಳಿಸಿಕೊಳ್ಳುವನು. ಅದಕ್ಕಾಗಿ ಸಭ್ಯತೆ, ಸೌಜನ್ಯದಿಂದ ವರ್ತಿಸಿ ತನ್ನನ್ನು ನಂಬುವಂತೆ ಮಾಡಿಕೊಂಡನು. ನಂತರ ಕುತಂತ್ರಗಳನ್ನು ರೂಪಿಸಿ ಸೂಗನಗೌಡನ ಮನೆತನವನ್ನು ಹೊಡೆದು ನುಚ್ಚುನೂರು ಮಾಡಿ ದಾಯಾದಿತನ ಮೆರೆಯುತ್ತಾನೆ. ಅಲ್ಲದೇ ತನ್ನ ತಿರಸ್ಕರಿಸಿದ ಮಾಬಿಯನ್ನು "ಅವಳಮ್ಮನ್ ಜಾತಿನಾಡಾ. ಹಿಂಗಂಡ್ಲ ಅವ್ಳು, ನೋಡ್ತಿನಿ, ಅವ್ಳುಳ್ ಹೆಂಗ ಸುಖದಿಂದ ಗೌಡನ ಜತಿಗಿರ್ತಾಳಾ; ಒಂದ್ ಕೈ ನೋಡೇಬಿಡ್ತೀನಿ. ಅವ್ಳನ್ನ ಬೀದಿಗೆಳ್ಸಿ ತುರಬ್ ಕೊಯ್ದು ಮಾನಾ ಕಳೀದಿದ್ರೆ ನಾ ನಮಪ್ಪ ಮಗ್ನೇ ಅಲ್ಲ"[೧೦] ಎನ್ನುತ್ತಾನೆ ಈಗ ಮೊದಲೇ ಪ್ರತಿಜ್ಞೆಗೈದಂತೆ ಮಾಬಿಯನ್ನು ಬೀದಿಗೆ ಹಾಕುವವರೆಗೆ ತನ್ನ ಹಟ, ವೈರತ್ವ ಸಾಧಿಸಿದ್ದಾನೆ. ವಿಕೃತ ಸ್ವಭಾವದ ವ್ಯಕ್ತಿಯಾಗಿದ್ದಾನೆ. 'ಹಾವಿಗೆ ಹಲ್ಲಲ್ಲೆಲ್ಲ ವಿಷವಿದ್ದರೆ ಮನುಷ್ಯನಿಗೆ ದೇಹದ ತುಂಬ ವಿಷವಿದೆ.' ಎಂಬ ಮಾತಿನಂತೆ ಇವನ ಹಟ ಒಂದು ಮನೆತನದ, ಒಂದು ಊರಿನ ನೆಮ್ಮದಿ

ಶಾಂತಿ ಹಾಳು ಮಾಡುತ್ತದೆ. ಹಾಗೆಯೇ ತಳವರ್ಗದ ಏನೂ ತಪ್ಪು ಮಾಡದ ಅಮಾಯಕ ಹೆಣ್ಣಾದ ಮಾಬಿ ಬದುಕು ಸರ್ವನಾಶ ಮಾಡುವವರೆಗೆ ಕ್ರೌರ್ಯ ಸಾಧಿಸುವ ವಿಷಾದ ಸಂಗತಿ ಈ ಕಾದಂಬರಿಯ ಒಡಲಿನಲ್ಲಿ ಚಿತ್ರಿತವಾಗಿದೆ.

**ಮಾಬಿ ಅವನತಿ ಹೊಂದುವ ಪ್ರಸಂಗ**

ಭಾರತದ ಚರಿತ್ರೆಯ ಪುಟಗಳನ್ನು ತಿರುವಿ ನೋಡಿದಾಗ ಅಮಾಯಕರು ಬಲಿಯಾಗುವುದು ಹೊಸ ಸಂಗತಿಯೇನಲ್ಲ. ಈ ಭೂಮಿಯ ಮೇಲೆ ಒಂದಲ್ಲ ಒಂದು ಕಾರಣಕ್ಕೆ ದ್ವೇಷ, ಅಸೂಯೆ ಬೆಳೆಯುತ್ತದೆ. ಇಷ್ಟಪಟ್ಟ ವಸ್ತು ತನ್ನನ್ನು ತಿರಸ್ಕರಿಸಿ ದೂರವಾದಾಗ ಅಥವಾ ಸ್ವಾಭಿಮಾನಕ್ಕೆ ಧಕ್ಕೆಬಂದಾಗ ಅಮಾಯಕರು, ಮುಗ್ಧರು, ಜನಸಾಮಾನ್ಯರು ಬಲಿಯಾಗುತ್ತಾರೆ. ಹಾಗೆಯೇ ರಾಮಾಯಣ, ಮಹಾಭಾರತ, ಚರಿತ್ರೆಯ ಪುಟಗಳಲ್ಲಿ ಸಹ ಬೇರೆಯವರು ಮಾಡಿದ ಕುತಂತ್ರಗಳು, ಸುಳ್ಳು ಮಾತುಗಳಿಂದ ಸೀತೆ, ದ್ರೌಪದಿಯರು ಸಂಕಷ್ಟವನ್ನು ಎದುರಿಸಬೇಕಾಗುತ್ತದೆ. ಹಾಗೆಯೇ ಪ್ರಸ್ತುತ ಸಾಮಾಜಿಕ ವ್ಯವಸ್ಥೆಯಲ್ಲೂ ಸಹ ವಿಕೃತ ಮನಸ್ಸಿನವರು ರೂಪಿಸಿದ ಕುಯುಕ್ತಿಯಿಂದ ಕೊಲೆ, ಸುಲಿಗೆ, ನಡೆಯುವುದಕ್ಕೆ ಕಾರಣವಾಗಿದೆ. ತಮ್ಮ ಸ್ವಾರ್ಥ ಸಾಧನೆಗೆ ಸ್ಪಂದಿಸದೆ ಅವರ ವಿರುದ್ಧ ನಿಂತು ಬದುಕು ಕಟ್ಟಿಕೊಂಡು ಬಾಳಲು ಈ ಸಾಮಾಜಿಕ ವ್ಯವಸ್ಥೆ ಬಿಡುವುದಿಲ್ಲ.

ಹಾಗೆಯೇ ಗಂಗನ ಹಳ್ಳಿಯಲ್ಲಿ ಮಾಬು ಗಂಗಪ್ಪ ಸಾವುಕಾರನನ್ನು ತಿರಸ್ಕಾರ ಮಾಡಿದಳೆಂಬ ಅಲ್ಲದೇ ಉನ್ನತವರ್ಗದವನಾದ ಅವನ ಸ್ಥಾನವನ್ನು ಕೀಳುಕುಲಕ್ಕಿಂತ ಕೆಳಸ್ತರದಲ್ಲಿಟ್ಟು ಹೀಯಾಳಿಸಿದಳೆಂಬ ಸುಳ್ಳಿನ ಮಾತು ಸಾವುಕಾರನ ವ್ಯಕ್ತಿತ್ವಕ್ಕೆ ಧಕ್ಕೆ ತಂದಿದೆ. ಅದಕ್ಕಾಗಿ ಅವಳ ಸಾವಿನವರೆಗೆ ಕಾಡುವುದು ವಿಷಾದನೀಯವಾಗಿದೆ.

ಮಾಬಿಯು ತಾಯಿಯಂತೆ ಸ್ನೇಹತ್ವದಿಂದ ಇದ್ದ ಅಕ್ಕ ಪಾರ್ವತಿ ಸತ್ತ ಮೇಲೆ ದುಃಖಿತಳಾಗುವಳು. ಅವಳನ್ನು ಒಂಟಿತನ ಕಾಡುತ್ತದೆ. ಅದಕ್ಕಾಗಿ ಅವಳ ಮಗುವನ್ನು ದೈನ್ಯದಿಂದ ಬೇಡಿ ಪಡೆದಳು. ತನ್ನ ಮಮತೆ, ಪ್ರೀತಿ ಧಾರೆಯೆರದು ಮಗು ಭೀಮನಗೌಡನನ್ನು ಪೋಷಿಸಿದಳು. ಅವನು ವಿದ್ಯಾಭ್ಯಾಸಕ್ಕಾಗಿ ರಾಯಚೂರಿಗೆ ಹೋದ ಮೇಲೆ ಏಕಾಂಗಿತನ ಕಾಡುವ ಕಾರಣ ದೈವತ್ವ, ಪುರಾಣ ಭಜನೆ ಮಾಡುವುದು ಮತ್ತು ಊರಿನ ಜನಸಾಮಾನ್ಯರ ಕಷ್ಟಕ್ಕಾಗುವ ಸಾಮಾಜಿಕ ಕಳಕಳಿ, ಚಿಂತನೆಯ ಕಡೆಗೆ ತನ್ನನ್ನು ತೊಡಗಿಸಿಕೊಳ್ಳುತ್ತಾಳೆ. ವೈರಾಗ್ಯ ತಾಳಿದಂತೆ ಸಾಮಾನ್ಯ ರೀತಿಯಲ್ಲಿ ಬದುಕು ಸಾಗಿಸುತ್ತಾಳೆ. ಮಾಬಿಯ ಬಸಿರು ಗೌಡ ಮತ್ತು ಊರಿಗೆ ಸಂತೋಷ, ಹರ್ಷ ತರುವ ಸಂಗತಿಯೇ ಆದರೂ ಅವಳಿಗೆ ಅದು ನೋವಿನ ಸಂಗತಿಯಾಗಿದೆ. ಯಾಕೆಂದರೆ ಜಾತಿಗೇರ ತಳಸಮುದಾಯದಲ್ಲಿ ಹುಟ್ಟಿದ ಹೆಣ್ಣಿಗೆ ಅಸ್ತಿತ್ವವಿಲ್ಲ. ಬವಣೆ ತುಂಬಿದ ಬದುಕಿನ ಬಗ್ಗೆ ಅವಳಿಗೆ ಇರುವ ನೋವು, ಜಿಗುಪ್ಸೆ, ಹತಾಶೆ ಇದಕ್ಕೆ ಕಾರಣವಾಗಿದೆಯೆಂನಿಸುತ್ತದೆ.

ಆದರೆ ಅವಳು ಮಲ್ಲಿಕಾರ್ಜುನನನೆಂಬ ಗಂಡುಮಗುವನ್ನು ಹೆತ್ತಳು. ಸೂಗನಗೌಡ ಹೊಸ ತೋಟದ ಮನೆಯ ಕೆಲಸದಲ್ಲಿ ತೊಡಗಿದ. ಅರ್ಧಕ್ಕೆ ವಿದ್ಯಾಭ್ಯಾಸ ಬಿಟ್ಟ ಮಗ ಊರಿನಲ್ಲಿ ಖಾಲಿಯಾಗಿ ತಿರುಗುತ್ತಾನೆ. ತಂದೆಯ ವೈರಿ, ದಾಯಾದಿಯಾದ ಗಂಗಪ್ಪ ಸಾಹುಕಾರನ ಮಗ ಆದೆನಪ್ಪ ಸ್ನೇಹ ಬೆಳೆಯುತ್ತದೆ. ಭೀಮನಗೌಡನ ವರ್ತನೆ ಬದಲಾವಣೆಯಿಂದ ಮನೆಯಲ್ಲಿ ಕಲಹಗಳು ನಡೆದವು. ಇದರ ಚಿಂತೆಯಲ್ಲಿ ಸೂಗನಗೌಡ ಮರಣ ಹೊಂದಿದನು. ತದನಂತರ ಗಂಗಪ್ಪನ ದ್ವೇಷಕ್ಕೆ ಚೆಲ್ಲಾಟ ಬರುತ್ತದೆ. ಅವನು ನಯ, ನಾಜೂಕು, ಸಭ್ಯಸ್ಥನಾಗಿ ವರ್ತಿಸಿ ಭೀಮನಗೌಡನು ತನ್ನನ್ನು ಸಂಪೂರ್ಣವಾಗಿ ನಂಬುವಂತೆ ತಂತ್ರವನ್ನು ರೂಪಿಸಿದನು ಮತ್ತು ತಾಯಿಯ ವಿರುದ್ಧ ನಿಲ್ಲುವಂತೆ ಮಾಡಿದನು. ಇದನ್ನು ಗಮನಿಸಿದ ಮಾಬು ಮಗನಿಗೆ "ಸೊಲ್ಪ ಎಚ್ಚರದಿಂದರಪ್ಪಾ, ಗಂಗಪ್ಪ ಒಳ್ಳೆ ಮನಿಸ್ಯಾ ಅಲ್ಲ, ಕೆಡ್ಸಿ ನೋಡೋ ಬುದ್ಧಿ ಆತಂದು"[೧೧] ಎನ್ನುವಳು ಯಾರು ಒಳ್ಳೆಯವರು, ಕೆಟ್ಟವರು ನನಗೂ ತಿಳಿಯುವುದು ಎಂದು ತಾಯಿಗೆ ಎದುರು ಉತ್ತರ ಕೊಡದವನು ಕೊಡುತ್ತಾನೆ. ಇವನು ಮನೆಯಲ್ಲಿ ಜಂಗಮರಿಗೆ ಊಟ ಹಾಕುವುದು, ಗುಡಿಗೆ ಹೋಗುವುದನ್ನು ತಡೆಯುತ್ತಾನೆ. ಪ್ರೀತಿಯಿಂದ ಕಾಣುವ ತಮ್ಮ ಮಲ್ಲಿಕಾರ್ಜುನನನ್ನು ದೂರ ಮಾಡುತ್ತಾನೆ. ಇದನ್ನು ಕಂಡು ಮಾಬು ಊರಿನ ಹಿರಿಯರ ಕೂಡ ಅವನಿಗೆ ಬುದ್ಧಿ ಹೇಳಿಸಿದರೂ ಕೇಳದ ಸ್ಥಿತಿಯನ್ನು ಮೀರಿ ಬಿಟ್ಟಿದ್ದಾನೆ ಎಂದು ಮಾಬಿಯನ್ನೇ ಸಮಾಧಾನಿಸುತ್ತಾರೆ. ಆಗ ಮತ್ತೆ ಇದನ್ನೆಲ್ಲ ಗ್ರಹಿಸಿದ ಗಂಗಪ್ಪ ಹೀಗೆ ಹೇಳುತ್ತಾನೆ. "ನೋಡ್ ಗೌಡಾ ಆ ಮಾಬಿ ಅಷ್ಟ್ ಒಳ್ಳ್ಯಾಕೆಲ್ಲ ಮೊದ್ಲು ಈ ವೂರಿಗೆ ಬಂದಾಗ ನನ್‌ಮ್ಯಾಗ ಕನಸಿಟ್ಲು. ನನಗ ನಿಮ್ಮಪ್ಪ ಜಗಳ ಹಚ್ಚಿದ್ಲು. ನಾವು ಅಣ್ಣತಂಬ್ರಂಗಿದ್ವಿ ಆಕಿ ಸಲ್ವಾಗಿ ಊರಾಗ ಜಗಳಾ ಸುರುವಾದ್ವು, ನನ್ ಮ್ಯಾಲಿನ್ ಸಿಟ್ನಿಂದ ನಿಮ್ಮಪ್ಗೇಳಿ, ನಿಮ್ ಸಾಮ್ಗಿಗೇನೇ ಬೆಂಕಿ ಹಚ್ಚಿಸಿ ನನ್ನ ಮ್ಯಾಲೆ ಹಾಕ್‌ಬೇಕಂತ ಮಾಡಿದ್ಲು. ನಾ ಶಕ್ತಿದ್ದವು, ತಡಕಂಡೆ, ಆಮ್ಯಾಲೇನ್ಮಾಡಿದ್ಲು ಗೋತಾ? ನಿಮ್ ತಾಯಿ ಹಡ್‌ದಾಗ ಸೂಲಗಿತ್ತಿನ್ನ ಬೇಕ್ ಮಾಡಿ ಕೆಂಡ್ ವಿಷಯಿಟ್ಟು ಕೊಲ್ಲಿ ಬುಟ್ಲು..."[೧೨] ಎಂದು ಹೇಳಿ ವಿಷಬೀಜ ಭಿತ್ತಿ ತನ್ನ ಕ್ರೌರ್ಯ ಮೆರೆದ. ಆದರೆ ಹೆತ್ತ ತಾಯಿ ಎಂದು ತಿಳದವಳು ತಾಯಿಯಲ್ಲ, ಹಡೆದ ತಾಯಿಗೆ ವಿಷಹಾಕಿ ಕೊಲ್ಲಿದವಳು ಎಂಬುದು ತಿಳಿದ ಮಗನಿಗೆ ಕೂಡ ಕೋಪ ಬರುವುದು ಸಹಜ. ಆದರೆ ತನ್ನನ್ನು ಪ್ರೀತಿ, ಮಮತೆ, ನಿಸ್ವಾರ್ಥತೆಯಿಂದ ಬೆಳೆಸಿದವಳು, ಮನೆಗೆ ಬೆಳಕಾದವಳು ಊರಿಗೆ ಉಪಕಾರಿಯಾಗಿ, ಮಾದರಿಯಾದ ತಾಯಿ ವಿಷವಿಡುವಳೆ ಎಂಬುದನ್ನು ಅರಿಯದೆ ಹೋದಂತಹದು ವಿಷದನೀಯವಾಗಿದೆ. ಇಲ್ಲಿ ಆದರ್ಶತ್ವ ಕೊರಗಿ ಕ್ರೌರ್ಯತ್ವ ಮೆರೆದಿರುವುದು ಕಾಣುತ್ತದೆ.

ಮಗನ ವರ್ತನೆಗಳು ದಿನದಿಂದ ದಿನಕ್ಕೆ ಬದಲಾಗುತ್ತ ಪ್ರತಿಯೊಂದಕ್ಕೂ ಅಡ್ಡಿ ಆತಂಕವನ್ನು ಒಡ್ಡುತ್ತಾನೆ. ಅದನ್ನು ಅರಿತ ಮಾಬು ದುಃಖಿತಳಾಗಿ ಸಾಯುವ ನಿರ್ಧಾರಕ್ಕೆ ಬರುತ್ತಾಳೆ. ಆದರೆ

ತಂದೆಯ ಆದರ್ಶವನ್ನು ನೆನೆದು ಮತ್ತು ಮಗ ಮಲ್ಲಿಕಾರ್ಜುನನ ಭವಿಷ್ಯದ ಬಗ್ಗೆ ಚಿಂತಿಸಿ ಗಟ್ಟಿತನದ ಜೀವನ ನಡೆಸಲು ಗಟ್ಟಿನಿಲುವು ತಾಳುತ್ತಾಳೆ. ಆದರೆ ಕೆಲವೇ ದಿನಗಳಲ್ಲಿ ಮಗ ಭೀಮನಗೌಡ ಮನೆಬಿಟ್ಟು ಹೋಗುವಂತೆ ಒತ್ತಾಯ ಹೇರುವನು, ಅದಕ್ಕಾಗಿ ಮಾಬು ಊರಿನ ಹಿರಿಯರನ್ನು ಕರೆಸಿ ಬುದ್ಧಿಹೇಳಿಸುವಳು. ಆದರೆ ಭೀಮನಗೌಡ "ಮನೆ ಅಧಿಕಾರ ನನಗೆ ಬೇಕು, ಗೌಡ್ಕೀನೂ ಬೇಕು, ಮುಖ್ತ್ಯಾರಿ ಬ್ಯಾಡ. ನಾನೇ ಗೌಡ್ಕಿ ಮಾಡ್ತೀನಿ"[೧೩] ಎಂದು ಹೇಳಿದ. ಮಮತೆಯಿಂದ ಸಾಕಿದ ತಾಯಿಗೆ ವ್ಯವಸ್ಥೆ ಎಂಬ ಪ್ರಶ್ನೆ ಬಂದಾಗ ಅವನು ಸ್ವಲ್ಪ ಹಣ ಆಭರಣ ತೆಗೆದುಕೊಂಡು ಅವಳ ಸ್ವಂತ ಊರಿಗೆ ಹೋಗಲಿ ಎಂದು ನಿಷ್ಠುರವಾಗಿ ಹೇಳಿದ. ಇಲ್ಲಿ ಮಮಕಾರತ್ವ ದೂರವಾಗಿ ಕ್ರೌರ್ಯತ್ವ ಆವರಿಸಿಕೊಂಡಿರುವುದು ಕಾಣುತ್ತದೆ. ಇದನ್ನು ಅರಿತ ಹಿರಿಯರು, ಸೂಗನಗೌಡ ಮಗನ ವರ್ತನೆಯನ್ನು ತಿಳಿದು ಮೊದಲೇ ಮಾಬಿ ಮತ್ತು ಗುರುಬಸಪ್ಪನಿಗೆ ಜೀವನ ಸಾಗಿಸುವುದಕ್ಕೆ ವ್ಯವಸ್ಥೆ ಮಾಡಿರುವ ವಿಷಯವನ್ನು ಹೇಳುತ್ತಾರೆ. ಅಲ್ಲದೆ ಮಾಬಿಗೆ ಹೊಸ ತೋಟ, ಐದು ಸಾವಿರ ರೂಪಾಯಿಗಳು ಮತ್ತು ಅವಳು ಬಂದ ಸಂದರ್ಭದಲ್ಲಿ ಹಾಕಿದ ಒಡವೆಗಳು ಅವಳಿಗೆ ಕೊಡುವಂತೆ ಹೇಳಿದ್ದಾನೆ. ಗುರುಬಸಪ್ಪನಿಗೆ ಹತ್ತು ಕೂರಿಗೆ ಹೊಲ ಬರೆದ ಪತ್ರ ಕೊಟ್ಟ ಸಂಗತಿ ತಿಳಿಸಿದರು. ಇನ್ನೊಮ್ಮೆ ತಂದೆ ಮಾಡಿದ್ದು ಇರಲಿ ಎಂದು ತಿಳಿಸಿ ಹೇಳಿದರು. ತಾಯಿ ಮನೆ ಬಿಟ್ಟು ಹೋಗಲಿ ಎಂದ ನಿಷ್ಠುರವಾಗಿ ಹೇಳುತ್ತಾನೆ. ಮನೆ ಹಿರಿತನದ ಕೀಲಿಕೈ ಒಪ್ಪಿಸಿ ಹಿರಿಯರಿಗೆ ಹೊಂದಿಸಿ ಹೋಗಲು ಸಿದ್ಧಳಾಗುತ್ತಾಳೆ. ಆಗ ರಾಚಯ್ಯ 'ಗಳಿಗೆ' ಚೆನ್ನಾಗಿಲ್ಲವೆಂದು ತಡೆಯುತ್ತಾನೆ. ಅದಕ್ಕಾಗಿ ರಾತ್ರಿ ಕಳೆದು ಬೆಳಗ್ಗೆ ದಿನನಿತ್ಯದ ವಿಧಿವಿಧಾನ ಮುಗಿಸಿ ದೇವಸ್ಥಾನಕ್ಕೆ ಹೋಗಿ ಬರುತ್ತಾಳೆ. ಅಷ್ಟರೊಳಗೆ ಊರಿನ ಜನ ಸೇರಿದ್ದರು. ಮಾಬಿಗೆ ಇಲ್ಲೇ ಇರುವ ವ್ಯವಸ್ಥೆ ಮಾಡುವುದಾಗಿ ಹೇಳಿದರು. ಅಲ್ಲದೆ 'ನೀನು ಈ ಊರಿನ ಲಕ್ಷ್ಮೀ ಮಾಬಮ್ಮ, ಊರ್ ಬುಟ್ಟು ಹೋಗಬಾರ್ದು, ನೀನಿಲ್ಲೆ ಇರು. ಮನೆ ಕಟ್ಟಿಕೊಡದು ಬ್ಯಾಡಂದ್ರೆ ನಮ್ಮನ್ಯಾಗ ಇರಮ್ಮ"[೧೪] ಎಂದು ರಾಚಯ್ಯ ಹೇಳುತ್ತಾನೆ.

ಭೀಮನಗೌಡ ಊರಿಗೆ ಬೇಕಾದ ತಾಯಿಯನ್ನು ಬಿಟ್ಟು ಊರಿನ ಜನರಿಂದ ತಿರಸ್ಕೃತವಾದವನು. ತಂದೆಯ ವೈರಿ ದಾಯಾದಿಯಾದ ಗಂಗಪ್ಪನ ಸ್ನೇಹ ಮಾಡುವುದು ಒಂದು ವಿಪರ್ಯಾಸವೇ ಸರಿ. ಏಕೆಂದರೆ ತಂದೆಯ ವೈರಿ ಮಗನಿಗೆ ಮಿತ್ರನಲ್ಲ. ಆದರೆ ಇಲ್ಲಿ ತದ್ವಿರುದ್ಧವಾಗಿ ಸಂಭವಿಸಿರುವುದು ಕಾಣುತ್ತದೆ. ಇಲ್ಲಿ ದಾಯಾದಿಯ ಕಪಟತನ, ಹಗೆತನ, ಪ್ರೀತಿ, ಮಮತೆ ಧಾರೆಯೆರೆದು ಬೆಳೆಸಿದ ತಾಯಿಯ ಮನಸ್ಸು ನಲಗುವಂತೆ ಮಾಡಿದೆ. ಊರಿಗೆ ಬೇಕಾದ ಮಾಬು ಮಗನಿಗೆ ಬೇಡವಾಗಿದ್ದಾಳೆ. ಕಾರಣ ತಮ್ಮನಿಗೆ ಆಸ್ತಿ ಹೋಗುವ ಭಯ, ತಾಯಿಗೆ ವಿಷ ಹಾಕಿ ಕೊಲ್ಲಿದಳೆಂಬ ದಾಯಾದಿಯ ಕುಯುಕ್ತಿಯ ಸುಳ್ಳು ಮಾತು ಇದಕ್ಕೆ ಕಾರಣವಾಗಿದೆಯೆನಿಸುತ್ತದೆ.

ಮಾಬು ಗಂಡ ಮಾಡಿದ ಹೊಸ ತೋಟಕ್ಕೆ ಹೋಗಲು ಮಗನ ಕೈ ಹಿಡಿದು ಹೊರಟು ನಿಂತಾಗ ಮಗನು ಚಿಕ್ಕವನು ಮತ್ತು ಒಬ್ಬಳೇ ಇರುವುದು ಬೇಡವೆಂದು ಅಮರಪ್ಪ ತಡೆಯುವ ಪ್ರಯತ್ನ ಮಾಡುವನು. ಮಾಬು, ಗೌಡನು ಪ್ರೀತಿಯಿಂದ ನೆನಪು ತುಂಬಿ ನನಗಾಗಿ ಕಟ್ಟಿದ ಮನೆಯದು ಮತ್ತು ಶಿವ್ಯಾನ ಸಂಸಾರವಿದೆ. ಅಲ್ಲೇ ಹೋಗಿ ನೆಲಸುವ ಧೃಡನಿರ್ಧಾರ ವ್ಯಕ್ತ ಪಡಿಸುತ್ತಾಳೆ. ಊರಿನ ಜನ ದುಃಖಿತರಾದರು. ಅಲ್ಲದೇ ತನ್ನದೊಂದು ಸುಳ್ಳು ಮಾತಿನಿಂದ ಮಾಬಿಯ ಬದುಕು ಅತಂತ್ರವಾಯಿತುವೆಂದು ವ್ಯಥೆ ಪಡುತ್ತಾಳೆ. ಸೊಸೆ ಶರಣಮ್ಮನನ್ನು ಸಮಾಧಾನಿಸಿ ತನಗೆ ಗೌಡ ಕೊಟ್ಟ ಸರವನ್ನು ಶರಣಮ್ಮಳಿಗೆ ಹಾಕಿ 'ಯಜಮಾನಿ' ಎಂದು ಹೇಳಿದಳು. ಗೌಡನ ಪ್ರೀತಿ ನೆನಪಿನೊಂದಿಗೆ ಮಗನ ಕೈ ಹಿಡಿದು ಹೊರಟಳು. ಊರಿಗೆ ಊರೇ ಅವಳ ಹಿಂದೆ ಬರುತ್ತಾರೆ. ಆಗ ಮಾಬು ಅವರನ್ನು ಬೇಡವೆಂದು ತಡೆದು ಮಗನಜೋತೆ ಹೊರಡುತ್ತಾಳೆ.

ಮಾಬು ಆ ಸಂದರ್ಭದಲ್ಲಿ ಹಿಂದಕ್ಕೆ ಈ ಹಳ್ಳಿಗೆ ಬರುವಾಗ ದೊಡ್ಡಮ್ಮನ ತಂಡದೊಂದಿಗೆ ಅಪ್ಪ-ಅಮ್ಮನನ್ನು ಕಳೆದುಕೊಂಡು ದಿಕ್ಕಿಲ್ಲದವಳಾಗಿ ಬಂದಿದ್ದಳು. ಆದರೆ ಇಂದು ಗೌಡನನ್ನು ಕಳೆದುಕೊಂಡು ದಿಕ್ಕಿಲ್ಲದವಳಾಗಿ ಹೊರಟಿರುವೆ. ಅಂದು ಅಷ್ಟು ಜನಗಳು ಇದ್ದರೂ ಏಕಾಂಗಿ ಅನಿಸಿತ್ತು. ಆದರೆ ಗೌಡನ ಮೂಲಕ ತನ್ನ ಆದರ್ಶತನಕ್ಕೆ ಸ್ಫೂರ್ತಿ ಕೊಟ್ಟು ಜೊತೆಗೆ ಮಗನನ್ನು ಬಿಟ್ಟು ಹೋಗಿದ್ದಾನೆ. ಅವನನ್ನು ಬೆಳೆಸುತ್ತೇನೆ. ತಂದೆಯ ಆದರ್ಶತನ ನೆನೆದು ಗಟ್ಟಿತನದಿಂದ ಆಶಾವಾದಿಯಾಗಿ ಜೀವನ ಸಾಗಿಸುತ್ತೇನೆ ಎಂದು ದೃಢಪಡಿಸಿಕೊಂಡಳು. ಆ ಸಮಯದಲ್ಲಿ ಕೋಲುಮಿಂಚು, ಸಿಡಿಲು ಒಡೆದು ತುಂತುರ ಹನಿ ದೊಡ್ಡ ಹನಿಯಾಗಿ ಮೋಡ ಕವಿದು ಭೂಮಂಡಲ ಮಂಜಾಗುತ್ತದೆ. ಅಂತಹ ಸಂದರ್ಭದಲ್ಲಿ ಭಯಭೀತಳಾಗಿ ಮಗನ ಜೊತೆಗೆ ಹಳ್ಳಕ್ಕೆ ಇಳಿದು ದಾಟಲು ಪ್ರಯತ್ನಿಸಿದಳು. ಶಿವ್ಯಾ ಹಳ್ಳಬರುವುದು ಎಂದು ಕೂಗಿ ಹೇಳಿದರೂ ಅದು ಕೇಳುವುದಿಲ್ಲ. ಹಳ್ಳದ ನಡುವೆ ಬಂದಾಗ ಹಳ್ಳ ತುಂಬಿ ಬಂದು ಮಗುವಿನ ಜೊತೆಗೆ ನೀರು ಪಾಲಾಗುತ್ತಾಳೆ. ಗಂಗಪ್ಪ ಸಾವುಕಾರ ಜಾತಿಗೇರ ಆಟ ಕೊಟ್ಟಾರ ಎಂದು ಮತ್ತೆ ಹಲಿಗೆನಾದ ಕೇಳುತ್ತದೆ. ಅಂದರೆ ತಳಸಮುದಾಯದ ಬದುಕು ಶೋಷಣೆ, ಅಸ್ತಿತ್ವಕ್ಕಾಗಿ ಹೋರಾಟದ ಹಾದಿ ಅನುಸರಿಸುವುದನ್ನು ಈ ಕಾದಂಬರಿ ಒಡಲಿನಿಂದ ಗುರುತಿಸಲಾಗಿದೆ.

### ೪.೨. ಕುರುಮಯ್ಯ ಮತ್ತು ಅಂಕುಶದೊಡ್ಡಿ

### ಜಂಬಣ್ಣ ಅಮರಚಿಂತರ ಸಂಕ್ಷಿಪ್ತ ಪರಿಚಯ

ಅಮರಚಿಂತರು ಮೂಲತಃ ಆಂಧ್ರಪ್ರದೇಶದವರು. ಇವರು ಮೂಲತಃ ಮಹೆಬೂಬ್ ನಗರ ಜಿಲ್ಲೆಯ ಗದ್ವಾಲ ತಾಲ್ಲೂಕಿನ ಅಮರಚಿಂತ ಗ್ರಾಮದಿಂದ ರಾಯಚೂರಿಗೆ ಬಂದು

ನೆಲೆಸಿದವರು. ಇವರು ೧೯೪೫ರಲ್ಲಿ ಜನಿಸಿದರು. ಇವರು ರಾಯಚೂರಿನ ಹಮ್‌ದರ್ದ್ ಪ್ರೌಢಶಾಲೆಯಲ್ಲಿ ಶಿಕ್ಷಣ ಪಡೆದರು. ಶಾಂತರಸರು ಇವರ ಗುರುಗಳಾಗಿದ್ದರು. ೧೯೬೩ ಪಿ.ಯು.ಸಿ. ಮುಗಿಸಿದರು. ಎಂಎ ಪದವಿ ಪಡೆದರು, ನಂತರ ಆರೋಗ್ಯ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದರು. ೧೯೭೨ರಲ್ಲಿ ರಾಯಚೂರು ಜಿಲ್ಲೆ ಡಿ.ಎಸ್.ಎಸ್.ನ ಪ್ರಥಮ ಸಂಚಾಲಕರಾಗಿದ್ದರು, ರಾಯಚೂರು ಸ್ವಚ್ಛಗೊಳಿಸಿ ಹೋರಾಟದ ಸಂಘದ ಸಲಹೆಗಾರರು, ಹಂಪಿ ಕನ್ನಡ ವಿಶ್ವವಿದ್ಯಾಲಯದ ಸಿಂಡಿಕೇಟ್ ಸದಸ್ಯರಾಗಿ, ಸಾಹಿತ್ಯ ಅಕಾಡಮಿ ಸದಸ್ಯರಾಗಿ ಕಾರ್ಯ ನಿರ್ವಹಿಸಿದರು. ಅಲ್ಲಿ ೧೯೭೩ರಲ್ಲಿ ಬಸವಲಿಂಗಪ್ಪನವರ ಬೂಸ ಪ್ರಕರಣ ದಲಿತ ಲೋಕಕ್ಕೆ ನಜಾಗರಘಟೆ ೧೯೭೮ಕ್ಕಿಂತ ಪೂರ್ವದಲ್ಲಿ ಭದ್ರಾವತಿ ಕೃಷ್ಣಪ್ಪನವರು ದಲಿತ ಲೇಖಕರ ಬಳಗ ಹುಟ್ಟುಹಾಕಿದರು. ೧೯೭೮ರಲ್ಲಿ ಧರ್ಮಸ್ಥಳದಲ್ಲಿ ನಡೆದ ೫೧ನೇ ಸಾಹಿತ್ಯ ಸಮ್ಮೇಳನ ಅಖಿಲ ಭಾರತ ಸಾಹಿತ್ಯ ಸಮ್ಮೇಳನ ನಡೆಯುವಲ್ಲಿ ಇವರು ಚನ್ನಣ್ಣ ವಾಲೀಕಾರ, ಬೋಳಬಂಡಪ್ಪ ಇನ್ನೂ ಮುಂತಾದವರು ಸಮ್ಮೇಳನದಲ್ಲಿ ಕವಿಗೋಷ್ಠಿ ಇಡಬೇಕು ಎಂದು ಮನವಿ ಪತ್ರಬರೆದರು. ಸಮ್ಮೇಳನದ ಅಧ್ಯಕ್ಷರಾದ ಹಂ.ಪ. ನಾಗರಾಜಯ್ಯ ಅವರು ದಲಿತ ಬಲಿತ ಕಲಿತ ಎಂಬ ಸಾಹಿತ್ಯವಿಲ್ಲ, ಸಾಹಿತ್ಯ ಒಂದೇ ಎಂಬ ಉತ್ತರ ಉಡಾಫೆ ಉತ್ತರ ನೀಡಿದ್ದಾರೆ ಎಂದು ಪತ್ರಿಕೆಯ ಮೂಲಕ ದಲಿತ ಬಂಡಾಯದ ಮಹತ್ವ ಹೇಳುತ್ತಾ ಸಚಿವ ಸ್ಥಾನಕ್ಕೆ ಸವಾಲು ಎಸೆದರು. ೧೯೯೭ರಲ್ಲಿ ರಾಯಚೂರು ಜಿಲ್ಲೆಯ ೪ನೇ ಕನ್ನಡ ಸಮ್ಮೇಳನದ ಅಧ್ಯಕ್ಷರಾದರು. ಇವರು ೧೯೯೯ರಲ್ಲಿ ಉತ್ತರ ಪ್ರದೇಶದ ಲಕ್ನೋದಲ್ಲಿ ನಡೆದ ಅಖಿಲ ಭಾರತ ಆಕಾಶವಾಣಿ ಕವಿಗಳನ್ನು ಕೂಡಿಕರಿಸಿ ಸಾಹಿತ್ಯವನ್ನು ಚಿಂತಿಸಿ ಅರಿವಿನಲೋಕ ವಿಸ್ತರಿದ್ದರಿಂದ ಕೃತಿಗಳು 'ಮುಂಜಾವಿನ ಕೊರಳು', 'ಆಧೋಜಗತ್ತಿಗೆ ಆ ಕಾವ್ಯ' 'ಮಣ್ಣಲ್ಲಿ ಬೀರಿದ ಅಕ್ಷರ' ಬರೆದರು. ಅಲ್ಲದೆ ಗಜಲ್, 'ಮುಳ್ಳಿನ ಬಾವಿಯಲ್ಲಿ' ಹೂವು ನಾಲಿಗೆ 'ಬಾಧೆಯ ವೃಕ್ಷದಲ್ಲಿ ಬೋಧಿಯ ಪರಿಮಳ' ಬುದ್ಧನ ಕುರಿತಾದ ಜೆನ್ ಕವನಗಳು, ಬಿಡಿಲೇಖನಗಳನ್ನು ಬರೆದರು. ಇವರು ದಲಿತ ಬಂಡಾಯ ನೊಂದ ಮನಸ್ಸಿನ ಧ್ವನಿಯಾಗಿ ಅಂಬೇಡ್ಕರ್‌ನ, ಲೋಹಿಯಾ, ಕಾರ್ಲ್‌ಮಾರ್ಕ್ಸ್‌ರ ಚಿಂತನೆಗಳನ್ನು ತುಲನಾತ್ಮಕವಾಗಿ ಗ್ರಹಿಸಿ ಅವರ ಮೂಲಕ ನೊಂದ ಮನಸ್ಸಿ ಪ್ರತಿಧ್ವನಿಯಾಗಿ ನಿಲ್ಲಲು ಪ್ರಯತ್ನಿಸಿದರು. ಅದಕ್ಕಾಗಿ 'ಆಧೋಜಗತ್ತಿನ ಆ ಕಾವ್ಯ' 'ಪೆಟ್ರೊ ಮಾಕ್ಸ ಹೊತ್ತ ಕೊರವರು'. 'ಕುರುಮಯ್ಯ ಮತ್ತು ಅಂಕುಶದೊಡ್ಡಿ' ಕೃತಿ ಬರೆದರು. ಇವರಿಗೆ ೧/೧.೨೦೦೨ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ದೊರೆಯಿತು.

ಹೀಗೆ ಸಾಹಿತ್ಯಲೋಕದಲ್ಲಿ ತಮ್ಮದೆಯಾದ ಗತ್ತು, ಗಮ್ಮತ್ತು ಇಟ್ಟುಕೊಂಡು ಉತ್ತಮ ಚಿಂತಕರಾಗಿ ಗುರುತಿಸಿಕೊಂಡ ಸರಳ ಸೃಜನತ್ಮಕ ಲೇಖಕರಾಗಿದರೆ ಇವರಾಗಿದ್ದಾರೆ.

**'ಕುರುಮಯ್ಯ ಮತ್ತು ಅಂಕುಶದೊಡ್ಡಿ' ಕಾದಂಬರಿಯ ವಿಶ್ಲೇಷಣೆ**

ಆಧುನಿಕ ಕನ್ನಡ ಸಾಹಿತ್ಯ ಪ್ರಕಾರದಲ್ಲಿ ತಳಸಮುದಾಯಗಳ ಪರವಾದ ಚಿಂತನೆಗಳನ್ನು ಹುಟ್ಟು ಹಾಕಿದವರು ಹೆಚ್ಚು ಬಂಡಾಯ, ದಲಿತ ಸಾಹಿತಿಗಳು, ಇವರು ತಮ್ಮ ಬರಹದಲ್ಲಿ ಕೇವಲ

ಮನರಂಜನೆಯ ವಿಷಯಗಳನ್ನು ಮಾತ್ರ ಸೆರೆ ಹಿಡಿದವರಲ್ಲ. ತಮ್ಮ ಸಮುದಾಯದ ನೋವು ಹತಾಶೆಗಳನ್ನು ಸಾಹಿತ್ಯ ಕೃತಿಗಳಲ್ಲಿ ಜೀವಂತವಾಗಿ ಸೆರೆ ಹಿಡಿದಿದ್ದಾರೆ. ಆ ಮೂಲಕ ದಲಿತ ಸಮುದಾಯಗಳನ್ನು ಸಮಾಜದ ಪ್ರತಿಷ್ಠಿತವರ್ಗಗಳು ಅಮಾನವೀಯವಾಗಿ ನೆಡಿಸಿಕೊಂಡಿರುವ ಕ್ರಮಗಳನ್ನು ಅನಾವರಣಗೊಳಿಸಿದ್ದಾರೆ. ಇಂತಹ ಬಂಡಾಯ-ದಲಿತ ಸಾಹಿತಿಗಳಲ್ಲಿ ಜಂಬಣ್ಣ ಅಮರಚಿಂತರು ಪ್ರಮುಖರಾಗಿದ್ದಾರೆ. ಇವರು ತಮ್ಮ ಸಾಹಿತ್ಯ ಕೃತಿಗಳಲ್ಲಿ ತಮ್ಮ ಸಮುದಾಯದ ಜನತೆಯು ಅನುಭವಿಸುವಂತಹ ಅಮಾನುಷವಾದ ಕ್ರಮಗಳನ್ನು ತಮ್ಮ ಸಾಹಿತ್ಯಕ್ಕೆ ಆಕರಗಳಾಗಿ ಬಳಸಿಕೊಂಡಿದ್ದಾರೆ. ಆಧುನಿಕ ಶಿಕ್ಷಣದಿಂದ ಇವರು ತಮ್ಮ ಸಾಮಾಜಿಕ ಸ್ಥಿತಿಗೆ ಕಾರಣವಾದ ಉನ್ನತ ವರ್ಗಗಳ ತಂತ್ರಗಾರಿಕೆಯ ಹಿಂದಿನ ಕಪಟವನ್ನು ಬಯಲಿಗೆ ಹಾಕುವ ಆಶಯವನ್ನು ಹೊತ್ತಿದ್ದಾರೆ. ಇವರ ಪ್ರತಿಯೊಂದು ಕೃತಿಯು ಕೇವಲ 'ಅಕಡೆಮಿಕ್' ಅಗಿರದೆ ಸಾಮಾನ್ಯರ ನೋವಿನೊಂದಿಗೆ ನೇರಸಂಬಂದ ಹೊಂದಿರುವ ತಳಸಮುದಾಯದ ಜನತೆಯಲ್ಲಿ ವೈಚಾರಿಕ ಪ್ರಜ್ಞೆಯನ್ನು ಮೂಡಿಸುವುದಾಗಿದೆ.

ಸಾಹಿತ್ಯಕವಾಗಿ ಮೊಟ್ಟಮೊದಲನೆಯ ಗ್ರಂಥ ಕವಿರಾಜಮಾರ್ಗದಿಂದ ಹಿಡಿದು ಪ್ರಸ್ತುತ ಕಾಲದವರೆಗಿನ ಸಾಹಿತ್ಯ ಮತ್ತು ಬಂಡಾಯ ಧೋರಣೆಯನ್ನು ವೈಚಾರಿಕ ಸಂಘರ್ಷಕ್ಕೆ ಈ ಪ್ರದೇಶವು ಗಟ್ಟಿನೆಲೆಯಾಗಿದೆ. ಧಾರ್ಮಿಕವಾಗಿ ಅನೇಕ ಮತಗಳ ಪ್ರಭಾವಕ್ಕೊಳಪಟ್ಟು ಮೇಲುವರ್ಗದ ಜನಜೀವನದಲ್ಲಿ ಚಾಲ್ತಿಯಲ್ಲಿರುವ ಬಹಳಷ್ಟು ಉಪಸಂಸ್ಕೃತಿಯ ಕುರುವುಗಳು ಈಗಲೂ ಉಳಿದು ಬಂದಿದೆ.

ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕವಾಗಿ ಅಲ್ಲೋಲಕಲ್ಲೋಲಗೊಳ್ಳುತ್ತ ಬಂದ ಈ ಭಾಗದ ಜನರು ಆಗಾಗ ಆಳುವ ವರ್ಗದ ಕೌರ್ಯ, ದಬ್ಬಾಳಿಕೆಗಳಿಗೆ ತುತ್ತಾಗಿದ್ದಾರೆ. ರಜಾಕಾರ ಸಂಘಟನೆಯು ಬಲಗೊಂಡುದರಿಂದ ಅವರ ಕ್ರೌರ್ಯವನ್ನು ಎದುರಿಸಲು ಈ ಭಾಗದ ಸಹೃದಯ ಬರಹಗಾರರು ತಮ್ಮ ಪ್ರತಿಭೆಯನ್ನು ಗುರುತಿಸಿಕೊಳ್ಳಲು ತುಂಬಾ ಪ್ರಯತ್ನಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಇಲ್ಲಿಯ ಕಾದಂಬರಿಗಳ ಕೊಡುಗೆ ಸಮಾಜ, ಸಂಸ್ಕೃತಿ, ಪ್ರಾದೇಶಿಕತೆ, ವಿಮರ್ಶೆ ಇವುಗಳೆಲ್ಲದರ ಕುರಿತು ಚಿಂತಿಸಿ ಪರಾಮರ್ಶಿಸಿ ಅವಲೋಕನಕ್ಕೆ ತೊಡಗಿದಾಗ ಹಲವು ವೈವಿಧ್ಯಮವಾದ ಸಂಗತಿಗಳು ಅನುಭವಕ್ಕೆ ಬಂದು ಕುತೂಹಲವನ್ನುಂಟು ಮಾಡುತ್ತವೆ.

'ಒಂದು ಸಮಾಜಕ್ಕಾಗಲೀ, ಒಂದು ದೇಶಕ್ಕಾಗಲಿ ರಾಜಕೀಯ ಸ್ವಾತಂತ್ರ್ಯಕ್ಕಿಂತಲೂ ಆತ್ಮಗೌರವವೇ ಪ್ರಮುಖವಾದದ್ದು ಎನ್ನುವುದು ಪೆರಿಯಾರರ ದೃಢವಾದ ನಿರ್ಧಾರವಾಗಿತ್ತು.' ಭಾರತದ ಚಾರಿತ್ರಿಕ ಸನ್ನಿವೇಶದಲ್ಲಿ ಪುರೋಹಿತಶಾಹಿಯು ಸೃಷ್ಟಿಸಿರುವ ವರ್ಣವ್ಯವಸ್ಥೆಯ ಅಡಿಯಲ್ಲಿ ಶೂದ್ರ ಸಮುದಾಯವನ್ನು ಎಲ್ಲಿಯೂ ತಲೆ ಎತ್ತದಂತೆ ಹಲವಾರು ಪುರಾಣ, ಧರ್ಮಗ್ರಂಥಗಳನ್ನು ರೂಪಿಸಿಕೊಂಡು ಶೋಷಣೆ ಮಾಡುತ್ತಲೇ ಬಂದಿದೆ. ಇವುಗಳ ಹಿಂದಿನ

ತಂತ್ರವನ್ನರಿತ ಎಡಪಂಥೀಯ ಬುದ್ಧಿಜೀವಿಗಳಿಗೆ ಇವುಗಳನ್ನು ಮುರಿದು ಕಟ್ಟುವಂತಹ ಸಾಮರ್ಥ್ಯವು ಬೆಳದುಬಂದಿದೆ ಇದರಿಂದ ಜಂಬಣ್ಣ ಅಮರಚಿಂತರು ತಮ್ಮ ಸಮುದಾಯದ ಜನತೆಯಲ್ಲಿ ಜಾಗೃತಿಯ ಅರಿವು ಮೂಡಿಸುವತ್ತ ತಮ್ಮ ವೈಚಾರಿಕತೆಯನ್ನು ಮೂಡಿಸಿರುವುದು ಕಂಡುಬರುತ್ತದೆ. ಇವರು ತಳಸಮುದಾಯಗಳಲ್ಲಿಯೇ ಹುಟ್ಟಿ ಬೆಳೆದು ಅವರ ಬದುಕಿನೊಂದಿಗೆ ನೇರ ಸಂಬಂಧವನ್ನು ಹೊಂದಿದವರು. ಇದರ ಫಲವಾಗಿಯೇ ದಲಿತವರ್ಗಗಳಿಗೆ ಅತ್ಮಗೌರವದ ಪ್ರಜ್ಞೆ ಮೂಡದ ಹೊರತು ಯಾವುದೇ ಪ್ರಗತಿ ಅಸಾಧ್ಯವೆಂದರಿತುಕೊಂಡವರು. ಪೆರಿಯಾರರ ತಾತ್ವಿಕ ಚಿಂತನೆಯ ಮಾದರಿಯನ್ನು ಕೇಂದ್ರವಾಗಿಟ್ಟುಕೊಂಡು ತಮ್ಮ ಸಮುದಾಯದ ಜನತೆಯಲ್ಲಿ ವೈಚಾರಿಕ ನಿಲುವುಗಳ ಮೂಲಕ ಜಾಗೃತಿ ಮೂಡಿಸಲು ಮುಂದಾಗಿರುವುದನ್ನು ಶ್ರೀಯುತರ ಕೃತಿಗಳಲ್ಲಿ ಗಮನಿಸಬಹುದಾಗಿದೆ.

ಲೋಹಿಯಾ ಅವರ ಅಕಾಡೆಮಿಕ್ ಸ್ಪರ್ಶ ಪಡೆದುಬಿಡುವ ತತ್ವಶಾಸ್ತ್ರದ ದೃಷ್ಟಿ. ಅದರೆ ಅಂಬೇಡ್ಕರ್, ಪೆರಿಯಾರ್ ಪುರಾಣಭಂಜನದ ಮೂಲಕ ಸಮುದಾಯದ ಆಲೋಚನಾಕ್ರಮಗಳ ಮಟ್ಟ ರಾಜಕೀಯ ಕ್ರಿಯೆಗೆ ಬೇಕಾದಷ್ಟು ಪರಿಣಾಮಗೊಳ್ಳಬೇಕು ಎಂಬುದು ಜರೂರಿತ್ತು. ವಚನಕಾರರು ಅಷ್ಟೆ ಬಂಡಾಯ ದಲಿತ ಆ ಕಾರಣದಿಂದಲೇ ಲೇಖಕರಿಗೆ ಪ್ರಿಯವಾದದ್ದು ಲೋಹಿಯಾ ಅಂಬೇಡ್ಕರ ಹಾಗೂ ಪೆರಿಯಾರ್ ವಿಧಾನ ಯಾಕೆಂದರೆ ಪ್ರತಿತ ಸಂಸ್ಕೃತಿಯ ಆಲೋಚನೆಗಳನ್ನು ಮಾನವೀಯತೆ ಮತ್ತು ವೈಚಾರಿಕ ತರ್ಕದಿಂದ ಮಂಡಿಸುವ ಈ ವಿಧಾನದಲ್ಲಿ ಚರಿತ್ರೆಯ ಮೇಲೆ ಸೇಡು ತೀರಿಸಿಕೊಳ್ಳುವ ವಿಚಿತ್ರ ಕಥೆಯಾಗುತ್ತದೆ. ಜಂಬಣ್ಣ ಅಮರಚಿಂತರು ಅಂಬೇಡ್ಕರ್ ಹಾಗೂ ಪೆರಿಯಾರ್‌ರ ಎಡಪಂಥೀಯ ಚಿಂತನೆಯ ಮಾದರಿಯನ್ನು ತಮ್ಮ ಸಾಹಿತ್ಯದಲ್ಲಿ ಮುಂದುವರಿಸುವುದು ಕಂಡುಬರುತ್ತದೆ. ಸಮಕಾಲೀನ ಸಂದರ್ಭದಲ್ಲಿ ಪುರೋಹಿತಶಾಹಿ ಕುತಂತ್ರಗಾರಿಕೆಯನ್ನು ಮುಕ್ತವಾಗಿ ಸ್ವೀಕರಿಸದೆ ತಮ್ಮ ವೈಚಾರಿಕ ನಿಲುವುಗಳ ಮುಖಾಂತರ ಅದಕ್ಕೆ ಪ್ರತಿರೋಧ ವ್ಯಕ್ತಪಡಿಸಿರುವುದನ್ನು ಇವರ ಸಾಹಿತ್ಯದಲ್ಲಿ ಗುರುತಿಸವಂತಹದಾಗಿದೆ.

ಈ ಕಾದಂಬರಿಯು ತಳಸಮುದಾಯದ ಕೊರವರ ಬದುಕಿನ ಬಹುಮುಖ ಆಯಾಮಗಳನ್ನು ಅನಾವರಣಗೊಳಿಸುತ್ತದೆ. ಈ ಕಾದಂಬರಿಯ ಕೇಂದ್ರ ಬಿಂದು ಕುರುಮಯ್ಯ. ಇವನ ಮುಖಾಂತರವಾಗಿ ಶ್ರೀಯುತರು ತಮ್ಮ ವೈಚಾರಿಕ ನಿಲುವುಗಳನ್ನು ಪ್ರತಿಪಾದಿಸುವುದು ಕಂಡುಬರುತ್ತದೆ. ಕುರುಮಯ್ಯ ಒಂದು ಪಾತ್ರವಾಗಿರದೆ ಅಂಕುಶದೊಡ್ಡಿ ಎಂಬ ತಾಂಡೆಯ ಜನರ ಬದುಕಿನ ಮಾರ್ಗದಾತನಾಗಿ ಕಂಡುಬರುತ್ತಾನೆ. ಶತ-ಶತಮಾನಗಳಿಂದ ಹಿಂದೂ ಮೂಲಭೂತವಾದಿಗಳು ಸೃಷ್ಟಿಸಿರುವ ಅಮಾನವೀಯ ಕಟ್ಟಳೆಗಳನ್ನು ಮುರಿದು ದಲಿತರಿಗೆ ಪರ್ಯಾಯ ಬದುಕನ್ನು ರೂಪಿಸಿಕೊಡುವ ನಿಜವಾದ ಅಂಬೇಡ್ಕರ್‌ವಾದಿಯಾಗಿ ಕಂಡುಬರುತ್ತಾನೆ. ಕುರುಮಯ್ಯ ಪಾತ್ರ ಚಿತ್ರದ ಹಿಂದೆ ಕಾದಂಬರಿಕಾರರಲ್ಲಿ ಅಡಗಿರಬಹುದಾದ ವೈಚಾರಿಕ ನಿಲುವುಗಳು ವ್ಯಕ್ತವಾಗಿವೆ. ಇಲ್ಲಿ ವೈಯಕ್ತಿಕ ಬದುಕಿಗಿಂತ ಸಾಮಾಜಿಕ ಕಳಕಳಿಯನ್ನು ಎತ್ತಿಹಿಡಿಯುತ್ತದೆ.

ಲೇಖಕರು ತಮ್ಮ ತಳಸಮುದಾಯದ ವಿಭಿನ್ನ ಆಯಾಮಗಳನ್ನು ತಾತ್ವಿಕ ನೆಲೆಯಲ್ಲಿ ಚಿತ್ರಿಸಿರುವುದು ಕಂಡುಬರುತ್ತದೆ. ಇಲ್ಲಿ ತಮ್ಮ ಸಮುದಾಯದ ನೋವು, ಬವಣೆಯನ್ನು ಏಕಮುಖ ನೆಲೆಯಲ್ಲಿ ಮಾತ್ರ ಚಿತ್ರಿಸದೆ ತಮ್ಮ ಸಮುದಾಯದಲ್ಲಿ ಅಡಗಿರಬಹುದಾದ ದೋಷವನ್ನು ಒರೆಗೆ ಹಚ್ಚಿದ್ದಾರೆ. ತಮ್ಮ ವೈಚಾರಿಕ ನಿಲುವುಗಳ ಮೂಲಕ ಮೌಢ್ಯತೆಯನ್ನು ನಿವಾರಿಸುವ ಕಾರ್ಯವನ್ನು ಇವರ ಬರಹಗಳಲ್ಲಿ ಕಾಣಬಹುದಾಗಿದೆ. ಇಲ್ಲಿ ಭಾಷೆಯು ದೇಶಿ ಸೊಗಡಿನಿಂದ ಕೂಡಿದ್ದು ಯಾವ ನಾಟಕೀಯ ಚಿತ್ರಣವಾಗಲಿ ಭಾಷೆಯ ಬಳಕೆಯಾಗಲಿ ಕಂಡುಬರುವುದಿಲ್ಲ. ಒಂದು ಸಮುದಾಯದ ಜನರ ಜೀವನವನ್ನು ಸಹಜ ಸ್ಥಿತಿಯಲ್ಲಿ ಜೀವ ತುಂಬುವ ಮೂಲಕ ಅವರು ಸಂವೇದನೆಗಳನ್ನು ಸೆರೆಹಿಡಿಯುವಲ್ಲಿ ಯಶಸ್ವಿಯಾಗಿದ್ದಾರೆ

ಈ ಕಾದಂಬರಿ ಕೊರವ ಜನಾಂಗದ ಸಮಗ್ರ ಬದುಕನ್ನು ಕಟ್ಟಿಕೊಟ್ಟಿದೆ. ಇದು ಯಾವುದೇ ಒಬ್ಬ ವ್ಯಕ್ತಿ ಒಂದು ಪಾತ್ರದ ಸುತ್ತ ಹೆಣೆದ ಕಥೆಯಾಗಿರದೆ, ಇಡೀ ಕೊರವ ಜನಾಂಗದ ಆಗುಹೋಗುಗಳ ಬದುಕು, ಬವಣೆ, ರೂಢಿ, ಸಂಪ್ರದಾಯ, ರೀತಿ-ರಿವಾಜುಗಳು ಸಮಸ್ಯೆ-ಸವಾಲುಗಳ ಮೇಲೆ ಬೆಳಕು ಚೆಲ್ಲುತ್ತದೆ.

ಕಾದಂಬರಿಯ ಮೊದಲ ಭಾಗದ 'ಲೇಖಕರ ಮಾತಿನಲ್ಲಿ' ಸ್ವತಹ ಲೇಖಕರು ಹೇಳುವಂತೆ "ತಮ್ಮ ತಟ್ಟಿ ಹೋಟಲಿನ ಅಂಗಳದಲ್ಲಿ ನಡೆಯುವ ಕೊರವರ ನ್ಯಾಯ ಪಂಚಾಯ್ತಿಗಳಲ್ಲಿ ಜಗಳ, ಜೂಟಿ, ಬೈಗುಳ, ಹೊಡೆದಾಟ ಬಡಿದಾಟವಾಡುವದು, ಅರ್ಥವಾಗದ ಭಾಷೆಯನ್ನು ಬಹು ಆತ್ಮೀಯತೆಯಿಂದ ಕಾತುರತೆಯಿಂದ ವೀಕ್ಷಿಸಿದ್ದರು. ಹೀಗಾಗಿ ಈ ಲೇಖಕರಿಗೆ ಕೊರವರೊಂದಿಗೆ ಅನ್ಯೋನ್ಯ ಸಂಬಂಧವಿದೆ. ಅಲ್ಲದೆ ಕೊರವರ ವೇಷಭೂಷಣ ಅವರಾಡುವ 'ಕುಳಿರ್ ಭಾಷೆ' ಅರ್ಥವಾಗದಿದ್ದರೂ ಲೇಖಕರನ್ನು ಆಕರ್ಷಿಸಿದೆ. ಕುಳಿರ್ ಭಾಷೆ ಎಂದಾಕ್ಷಣ ಕಾದಂಬರಿಯಲ್ಲಿ ಲೇಖಕರು ಈ ಭಾಷೆಯನ್ನು ಬಳಸಿಲ್ಲ. ಸಾಮಾನ್ಯ ಓದುಗರನ್ನು ಗಮನದಲ್ಲಿ ಇಟ್ಟುಕೊಂಡು ಹೈದರಾಬಾದ್ ಕರ್ನಾಟಕದ ಪ್ರಾದೇಶಿಕ ಭಾಷೆಯನ್ನೇ ತಮ್ಮ ಸಾಹಿತಿಕ ಬರವಣಿಗೆಗೆ ಬಳಸಿದರು ಹಾಗೂ ಕೆಲವೊಂದು ಸಂಭಾಷಣೆಯ ಮಾತುಗಳಲ್ಲಿ ಕುಳಿರ್, ತೆಲುಗು ಪದಗಳನ್ನು ಉಪಯೋಗಿಸಿದ್ದಾರೆ.

ಈ ಕಾದಂಬರಿಯು ಏದು ಬೇಟೆಯಿಂದ ಪ್ರಾರಂಭವಾಗುವುದು. ಏದು ಬೇಟೆಯು ಕೊರವ ಜನಾಂಗದ ಶೋಷಣೆಯ ಬೇಟೆಯಾಗಿ ಕಾದಂಬರಿ ತುಂಬಾ ಹರಡಿಕೊಂಡಿದೆ. ಉನ್ನತವರ್ಗಗಳ ಮತ್ತು ತಳಸಮುದಾಯವಾದ ಕೊರವ ಬದುಕಿನ ನಡುವಿನ ಜೀವನ ಕಥನವಾಗಿದೆ. ಇಲ್ಲಿ ಉನ್ನತವರ್ಗದ ಜಮೀನ್ದಾರರು ಕೆಳವರ್ಗದ ಕೊರವರನ್ನು ಆರ್ಥಿಕವಾಗಿ, ರಾಜಕೀಯವಾಗಿ ರಾಜಕೀಯ ದಾಸ್ಯಕ್ಕೆ ಗುರಿಪಡಿಸಿದರೆ ಮತ್ತೊಂದು ಕಡೆ ಜಾತಿವಾದಿಗಳು ಸಾಮಾಜಿಕವಾಗಿ, ಧಾರ್ಮಿಕವಾಗಿ ಇವರನ್ನು ದಾಸ್ಯಕ್ಕೆ ನೂಕುವುದು ಕಂಡುಬರುತ್ತದೆ. ಈ ಕಾದಂಬರಿಯಲ್ಲಿ

ಅಂಕುಶದೊಡ್ಡಿ ಎಂಬ ತಾಂಡೆಯಲ್ಲಿ ವಾಸಿಸುವ ಕೊರವರ ಬದುಕು, ಜಾತಿಯ ಅಂಕುಶ ತಿವಿತದಿಂದ ಶೋಚನೀಯವಾಗಿದೆ. ಆನೆಯಂತೆ ಬಲಿಷ್ಠವಾಗಿರುವ ಈ ತಳಸಮುದಾಯವನ್ನು ಉನ್ನತ ಜಾತಿಯ ಫ್ಯೂಡಲ್‌ಗಳು ತಮಗೆ ಬೇಕಾದ ಹಾಗೆ ಪಳಗಿಸಿಕೊಂಡಿರುವುದು ಕಂಡುಬರುತ್ತದೆ.

**ಕೊರವರ ವಾಸಸ್ಥಾನದ ಮೂಲ**

ಕೊರವ ಸಮುದಾಯ ವಾಸವಾಗಿರುವ ಸ್ಥಾನ ಅಂಕುಶದೊಡ್ಡಿಯಾಗಿದೆ. ಇದು ಮೂಲತಃ ಇನ್ನೊಂದು ತಳ ಜನಾಂಗವಾದ ಅಲೆಮಾರಿ ಲಂಬಾಣಿಗರದಾಗಿದೆ. ಅವರು ತುತ್ತಿನ ಚೀಲ ತುಂಬಿಸಿಕೊಳ್ಳುವುದಕ್ಕಾಗಿ ಬೇರೆ ಬೇರೆ ಕಡೆಗೆ ಗುಳೆ ಹೋಗುತಿದ್ದರು. ಅಂತಹ ಸಂದರ್ಭದಲ್ಲಿ ಕೊರವರು ಆ ಸ್ಥಾನವನ್ನು ಆಕ್ರಮಿಸಿಕೊಂಡರು. ಆ ಸಂದರ್ಭದಿಂದ ಅಂಕುಶದೊಡ್ಡಿ ಯಾಗಿ ಪರಿವರ್ತನೆಯಾಯಿತು. ಅದಲ್ಲದೆ ಹಿಂದಿನ ಕಾಲದಲ್ಲಿ ಈ ಜಾಗದಲ್ಲಿ ಭೀಕರವಾದ ಕೀಕಾರಣ್ಯವಾಗಿದೆಯಂತಲೂ ತಿಳಿಯುತ್ತಿದೆ. ರಾಜರು ಹಿಡಿದುತಂದ ಕಾಡು ಆನೆಯನ್ನು ಮಾವುತರು ಅಂಕುಶಗಳಿಂದ ತಿವಿದು ಪಳಗಿಸುತ್ತಿದ್ದರು. ಇದರಿಂದ ಇಲ್ಲಿನ ಸುತ್ತ-ಮುತ್ತಲಿನ ಪರಿಸರವನ್ನು ಅಂಕುಶದೊಡ್ಡಿ ಎಂದು ಕೂಡ ಕರೆಯುತ್ತಾರೆ.

ಅಲ್ಲದೆ ರಾಯಪುರದ ಎಲ್ಲ ವರ್ಗದ ಜನರ ಮನೆಯ ಬಚ್ಚಲನೀರು, ಹೊಲಸುನೀರೆಲ್ಲ ಚರಂಡಿಯ ಮೂಲಕ ಹರಿದು ಕೆರೆಗೆ ಸೇರುತ್ತದೆ. ಇದು ನಿಂತಲ್ಲೇ ನಿಂತು ಹೆಪ್ಪುಗಟ್ಟಿ ಕಪ್ಪಾಗುತ್ತದೆ. ಇದರಿಂದ ಕರಿಕೆರೆಯಂತಲೂ ಮತ್ತು ರಾಯಪುರದ 'ತಿಕ' ಎಂದು ಸಹ ಕರೆಯುವುದು ತೋರುತ್ತದೆ.

ಅಂಕುಶದೊಡ್ಡಿ ಹೊಕ್ಕು ಹೊಡ್ಡಿ ಹೊಕ್ಕು ಹೊರಬರ ಬೇಕಾದರೆ ಚಕ್ರವ್ಯೂಹ ಕೋಟೆ ಭೇದಿಸಿ ಹೊರಬಂದಂತಾಗುತ್ತದೆ"[೧೫]. ಇವರು ಬದುಕುವ ಪರಿಸರ ತುಂಬ ನಿಕೃಷ್ಟವಾದ ವಾತಾವರಣದಿಂದ ಕೂಡಿದೆ. ಈ ಸಮುದಾಯಕ್ಕೆ ಕನಿಷ್ಠ ಮೂಲಭೂತ ಸೌಕರ್ಯವಿಲ್ಲದೆ ಅಸಹಾಯಕ ಸ್ಥಿತಿಯಿಂದ ಬದುಕುವುದಾಗಿದೆ. ಇದರಿಂದಾಗಿ ಈ ಜನಸಮುದಾಯದ ಬದುಕು ಚಿಂತಾಜನಕವಾಗಿದೆ. ಇವರು ಹಂದಿ ಸಾಕಾಣಿಕೆ ಮತ್ತು ಅದರ ಗೊಬ್ಬರ ಸಂಗ್ರಹಿಸುವುದು ಪ್ರಮುಖ ವೃತ್ತಿಯಾಗಿ ರೂಢಿಸಿಕೊಂಡವರು. ಇದನ್ನು ಕೂಡಿಹಾಕಿದ ರಾಶಿ ಕಡೆಯಿಂದ ಬೀಸುವ ಗಾಳಿಯಿಂದ ಬರುವಂತಹ ವಾಸನೆ 'ನರಕ'ವಾಗಿದ್ದರೂ ಅದಕ್ಕೆ ಹೊಂದಿಕೊಂಡು ಬದುಕುವುದು ಅನಿವಾರ್ಯವಾಗಿದೆ. ಇವರಿಗೆ ಇದನ್ನು ಬಿಟ್ಟು ಬೇರೆ ವೃತ್ತಿ ಮಾಡಲು ಆರ್ಥಿಕ ಸಂಕಷ್ಟ ಕಾಡುತ್ತದೆ. ಬಂಡವಾಳಶಾಹಿ ವ್ಯವಸ್ಥೆಯ ನಿರ್ಬಂಧಗಳಿಂದ ಬಿಡಿಸಿಕೊಳ್ಳಲಾಗದೆ ಅದೇ ನಿಕೃಷ್ಟ ವೃತ್ತಿ ಮತ್ತು ಕಲುಷಿತ ವಾತಾವರಣಕ್ಕೆ ಹೊಂದಿಕೊಂಡು ಬದುಕುವಂತಹ ದುರಂತ ಸ್ಥಿತಿಯಾಗಿದೆ.

## ಕೊರವ ವೃತ್ತಿ

ಶತ-ಶತಮಾನಗಳಿಂದ ಚರಿತ್ರೆಯ ಉದ್ದಕ್ಕೂ ಪುರೋಹಿತಶಾಹಿ ವರ್ಗ ಈ ವ್ಯವಸ್ಥೆಯನ್ನು ರೂಢಿಸಿದೆ. ಇದು ಶ್ರೇಣೀಕೃತ ವ್ಯವಸ್ಥೆ. ಇಲ್ಲಿ ಶ್ರೇಷ್ಠ-ಕನಿಷ್ಠ ಎಂಬ ಪರಿಕಲ್ಪನೆ ಹುಟ್ಟುಹಾಕಿದರು. ತಳವರ್ಗದ ದಲಿತ ಸಮುದಾಯಗಳನ್ನು ಮೇಲುವರ್ಗವು ತಮ್ಮ ಅಧೀನರನ್ನಾಗಿ ಮಾಡಿದೆ. ಅವರನ್ನು ಇನ್ನೂ ಕೆಳಸ್ತರಕ್ಕೆ ನೂಕಿದೆ. ಜೀತದಾಳು, ನಿಕೃಷ್ಟವಾದ ಕೀಳುವೃತ್ತಿ ಮಾಡುತ್ತ ಅವರ ಅಡಿಯಾಳಾಗಿ ಬದುಕುವ ವ್ಯವಸ್ಥೆಯನ್ನು ರೂಪಿಸಿದ್ದಾರೆ. ಇದರಿಂದಾಗಿ ಕೊರವರು ಹಂದಿ ಸಾಕಾಣಿಕೆ ವೃತ್ತಿ ಅನುಸರಿಸಿರುವುದು ಕಂಡುಬರುತ್ತದೆ. ಅದಕ್ಕಾಗಿ ಹಂದಿಗಳ ಸಾಕಾಣಿಕೆ ಪಾಲನೆ-ಪೋಷಣೆ ಇವರ ಪ್ರಮುಖವಾದ ದಂಧೆ, ಹಸಿಮಾಂಸ, ಹಂದಿಗೊಬ್ಬರ ಮಾರಾಟ ಅವರ ಮುಖ್ಯ ಕಸುಬುಗಳಾಗಿವೆ. ಇವರು ಹಂದಿಗಳನ್ನು ಮಕ್ಕಳಂತೆ ಪ್ರೀತಿಯಿಂದ, ಮಮತೆಯಿಂದ ಸಾಕಿ ಬೆಳೆಸುತ್ತಾರೆ. ಹಂದಿ ಮತ್ತು ಹಂದಿಮರಿಗಳ ಆಟ-ಪಾಟಗಳನ್ನು ನೋಡಿ ಖುಷಿಪಡುತ್ತಾ ನೋವು ಮರೆಯುತ್ತಾರೆ. ಇವುಗಳಿಗೆ ನೋವಾದರೆ ಸಂಕಟ ಪಡುವ ಮಾನವೀಯತೆಯ ಹೃದಯ ಈ ತಳಸಮುದಾಯಕ್ಕೆ ಇರುವುದನ್ನು ಕಾಣುತ್ತೇವೆ. 

ಒಮ್ಮೆ ಊರ ನಾಗನಗೌಡನ ಹೆಂಡತಿ ಬಹಿರ್ದೆಸೆಗೆ ಕುಳಿತಾಗ ಕೊರವರ ದೌಲ್ಯನ ಹಂದಿಯೊಂದು ಇವಳ ಹಿಂಭಾಗವ ಮುಟ್ಟಿತೆಂದು ಆ ಗೌಡ ತನ್ನ ಆಳುಗಳಿಂದ ಆ ಹಂದಿಯ ಹಿಂಗಾಲಿನ ಎಲುಬು ಮುರಿಯುವವರೆಗೆ ಹೊಡಸಿದ್ದ. ಹಂದಿಯ ಮಾಲೀಕ ದೌಲ್ಯ ಮೂಕ ಪ್ರೇಕ್ಷಕನಾಗಿದ್ದಾನೆ. ಹಂದಿ ತನ್ನದೆಯಾದರೂ ಹಂದಿಗಾದ ಶಾಸ್ತಿ ತನಗಾದಿತೆಂದು ಭಯ ಅವನಿಗೆ ಕಾಡಿದೆ. ಆದರೆ ಅವನು ತನ್ನೊಳಗೆ ಸಿಟ್ಟಿನಿಂದ ಗೌಡ ಮತ್ತು ಅವನ ಹೆಂಡತಿಯನ್ನು ನಿಂದಿಸಿ ಶಪಿಸುತ್ತಿದ್ದ. ಹೀಗೆ ತನ್ನ ಹೊಟ್ಟೆಯೊಳಗಿನ ಕಿಚ್ಚನ್ನು ತಣ್ಣಗಾಗಿಕೊಂಡನು. ಹೀಗೆ ಲೇಖಕ ತಳಸಮುದಾಯದ ಅಸಹಾಯಕತೆಯನ್ನು ಗುರುತಿಸಿದ್ದಾರೆ.

ಇವರು ಹಂದಿ ಸಾಕಾಣಿಕೆಯ ಜೊತೆಗೆ ತುತ್ತಿನ ಚೀಲ ತುಂಬುವುದಕ್ಕಾಗಿ, ತಮ್ಮ ಆರ್ಥಿಕ ಸಂಕಷ್ಟ ಸರಿದೂಗಿಸುವ ಸಲವಾಗಿ ಕೆಲವು ಗುಡಿಕೈಗಾರಿಕೆ ಕುಲಕಸಬುಗಳಾದ ಚಾಪೆ, ಬುಟ್ಟಿ, ಮೊರ, ಚಿಕ್ಕ ಮಂಕರಿ, ಬಾರಿಗೆ, ಗುಮ್ಮಿ ಇವುಗಳನ್ನು ತಯಾರಿಸಿ ಮಾರಿ ಅಲ್ಪಸ್ವಲ್ಪ ಆರ್ಥಿಕ ಹೊರೆಯನ್ನು ನೀಗಿಸಿಕೊಳ್ಳುವಂತಹದನ್ನು ಕಾಣುತ್ತೇವೆ. ಇಂತಹ ಸಂದರ್ಭದಲ್ಲಿ ಸಹ ಜಮೀನ್ದಾರರು 'ಅಯಗಾರ' ಎಂದು ಇವುಗಳನ್ನು ಪುಕ್ಕಟೆಯಾಗಿ ಪಡೆದುಕೊಳ್ಳುವುದು ಕಾಣುತ್ತದೆ. ಕೊರವರು ಸಭೆ ಸಮಾರಂಭಗಳಲ್ಲಿ ಶಹನಾಯಿ ಊದುವುದು, ಪೆಟ್ರೋಮಾಕ್ಸ್(ಬಿಜಲಿ)ನ್ನು ತಲೆಯ ಮೇಲೆ ಹೊತ್ತುಕೊಂಡು ಎಲ್ಲರಿಗೂ ದಾರಿ ತೋರುವರು. ಇವರ ತಲೆಯ ಕೆಳಗೆ ಕತ್ತಲೆ ಇರುವ ಹಾಗೆ ಇವರ ಬಾಳು ಕೂಡ ಅಂಧಕಾರದಲ್ಲಿ ಮುಳುಗಿದೆ. ಅಜ್ಞಾನ, ಅಂಧಶ್ರದ್ಧೆ, ಮೂಢನಂಬಿಕೆ, ಶೋಷಣೆ ಇವರ ಬದುಕನ್ನು ಕತ್ತಲಾಗಿಸಿವೆ ಎಂದು ಈ ಕೃತಿಯ ಒಡಲಿನಿಂದ ಗ್ರಹಿಸಿ ಗುರುತಿಸಲಾಗಿದೆ.

## ಐತಿಹ್ಯ

ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರತಿಯೊಂದು ಜಾತಿ ಜನಾಂಗಕ್ಕೂ ತನ್ನದೇಯಾದ ಐತಿಹ್ಯಗಳು ಹುಟ್ಟಿಕೊಂಡಿರುತ್ತವೆ. ಈ ಹಿನ್ನೆಲೆಯಲ್ಲಿ ನೋಡುವುದಾದರೆ ಕೊರವ ಸಮುದಾಯಕ್ಕೂ ಒಂದು ಐತಿಹ್ಯ ಇರುವುದನ್ನು ಮೇಲುವರ್ಗದ ಮೂಲಕ ಈ ಕಾದಂಬರಿಯಲ್ಲಿ ಗುರುತಿಸಲಾಗಿದೆ. ಆದರೆ ಕೆಲವು ಜನಾಂಗದವರು ವಿದ್ಯಾವಂತರು ಅನಕ್ಷರಸ್ಥರಾದರೂ ಅದರ ಚಹರೆಗಳನ್ನು ಅರಿತಿರುತ್ತಾರೆ. ಆದರೆ ಈ ಜನಾಂಗಕ್ಕೆ ಅದರ ಕೂದಲ ಎಳೆಯಷ್ಟು ಪರಿಜ್ಞಾನ ಸಹ ಇರದಾಗಿದೆ. ಏಕೆಂದರೆ ಅಜ್ಞಾನ, ಅಂಧಕಾರ ಬಡತನದ ತೊಳಲಾಟದಲ್ಲಿ ಒದ್ದಾಡುತ್ತ ಅದರ ಲಯ ಇವರಿಗೆ ದೊರಕದೆ ಹೋಗಿರುವಂತಹದು ತೋರುತ್ತದೆ. ಮೇಲುವರ್ಗದ ರಂಗಪ್ಪ ನೀವು ಸಾಕುವ ಹಂದಿ 'ಕೃಷ್ಣ ಪರಮಾತ್ಮ' ನೀವು ಪಾಂಡವರ ಸಂತಾನದ ಶ್ರೇಷ್ಠ ಕುಲದವರು ಎಂದು ತಿಳಿಸಿಕೊಡುತ್ತಾನೆ. ಇದನ್ನು ಅರ್ಥೈಸಿಕೊಳ್ಳದಲಾಗದ ಹೀನಾಯ ಸ್ಥಿತಿಯಲ್ಲಿ ಈ ಜನಾಂಗದವರ ಬದುಕು ನಿಂತಿರುವಂತಹದ್ದನ್ನು ಲೇಖಕರು ಗ್ರಹಿಸಿರುವುದು ಕಾಣುತ್ತಿದೆ.

## ಕೊರವರ ಪಂಚಾಯಿತಿ ವ್ಯವಸ್ಥೆ

ಕೊರವರು ಬುಡಕಟ್ಟು ಸಮುದಾಯದವರು. ತಮ್ಮ ಸಮಸ್ಯೆಯನ್ನು ತಮ್ಮ ಒಂದು ನ್ಯಾಯಿಕ ವ್ಯವಸ್ಥೆಯಲ್ಲಿ ಬಗೆಹರಿಸಿಕೊಳ್ಳುತ್ತಾರೆ. ಇವರು ಅರಳಿ ಮರದ ಕೆಳಗಡೆ ನ್ಯಾಯ ಪಂಚಾಯ್ತಿ ನಡೆಸುತ್ತಾರೆ. ಈ ಸಮುದಾಯದ ಹಿರಿಯರು ಮತ್ತು ಕುರುಮಯ್ಯನವರ ಮುಂದೆ ಪಂಚಾಯ್ತಿಡುತ್ತಾರೆ. ಮಾರಪ್ಪನ ಹೆಂಡತಿ ಬುಡ್ಡಮ್ಮ ಜಂಬಯ್ಯನ ಜೊತೆಗೆ ಕೂಡಿರುತ್ತಾಳೆ. ಇದು ಅವರ ಮಂದಿಗೆ ಸರಿ ಎನಿಸುವುದಿಲ್ಲ. ಅವರಿಬ್ಬರನ್ನು ಎಳೆದು ತಂದು ಅವರ ಹಿರಿಯನಾದ ಕುರುಮಯ್ಯನ ಮುಂದೆ ನಿಲ್ಲಿಸುತ್ತಾರೆ. ಅನಕ್ಷರಸ್ಥ ಕುರಮಯ್ಯ ಅವರ 'ಅನೈತಿಕತೆ' ಬಗ್ಗೆ ನ್ಯಾಯ ನಿರ್ಣಯಿಸಲು ಯೋಚಿಸುತ್ತಾನೆ. ಇಂತಹ ಒಂದು ಪ್ರಸಂಗ ಈ ಕಾದಂಬರಿಯಲ್ಲಿ ಮೂಡಿಬಂದಿದೆ. ಕೊರವ ಜನಾಂಗದಲ್ಲಿ ಇಂತಹ ಬಿಕ್ಕಟ್ಟಿನ ಸಂದರ್ಭದಲ್ಲಿ ಕುರುಮಯ್ಯ ನ್ಯಾಯಪಂಚಾಯ್ತಿಯನ್ನು ಸೇರಿಸುತ್ತಾನೆ.

ವಾಸ್ತವ ಸಂಗತಿಯೆಂದರೆ ಕೊರವರಿಗೆ ಈ ಪ್ರಸಂಗದಲ್ಲಿ ಯಾರದು ಸರಿ, ಯಾರದು ತಪ್ಪು ಎಂಬುದು ಗೊತ್ತಿದ್ದರೂ ಅವರೇ ಕಟ್ಟಿಕೊಂಡಿರುವ ವ್ಯವಸ್ಥೆಯನ್ನು ಮೀರದೆ ಅದಕ್ಕೆ ಅನುಗುಣವಾಗಿ ನಡೆದುಕೊಳ್ಳುವುದು ಧರ್ಮದ ಪ್ರಶ್ನೆಯಾಗಿದೆ. ಅಶಕ್ತನಾದ ಮಾರಪ್ಪ ಬುಡ್ಡಮ್ಮನಿಗೆ ಮೂಲಭೂತವಾದ ದೈಹಿಕ ಸುಖವನ್ನು ನೀಡದ ಕಾರಣ ಅವಳು ಜಂಬಯ್ಯನ ಜೊತೆಗೆ ಸಂಬಂಧವನ್ನು ಇಟ್ಟುಕೊಂಡಿದ್ದಾಳೆ ಎಂಬುದು ಎಲ್ಲರಿಗೂ ಗೊತ್ತಿರುವಂತಹ ಸಂಗತಿಯೇ ಆದರೆ, ಅವಳ ಗಂಡನಾದ ಮಾರಪ್ಪನಿಗೆ ಸಹಿಸಲು ಅಸಾಧ್ಯವಾದ ಸಂಗತಿಯಾಗುತ್ತಿದೆ.

ಈ ಸಮುದಾಯದ ಹಿರಿಯ ವ್ಯಕ್ತಿಯಾದ ಕುರಮಯ್ಯನಿಗೆ ಕೇವಲ ಇನ್ನೂರು ರೂಪಾಯಿ ಸಾಲ ಪಡೆದ ಕಾರಣ ಯರಗೇರಿಯ ಬುಡ್ಡಣ್ಣ ಸಾಲ ತೀರಿಸಲಾಗಲಿಲ್ಲ ಅದಕ್ಕಾಗಿ ಅವನು ಸಾಲದ ಪ್ರತಿಯಾಗಿ ತನ್ನ ಹೆಂಡತಿಯನ್ನು ಕುರುಮಯ್ಯನಿಗೆ ಮಾರಿ ಹೋಗಿದ್ದ. ಇಳಿವಯಸ್ಸಿನ ಇವನಿಗೆ ಆಕೆಯನ್ನು ನಿಭಾಯಿಸುವುದು ಸ್ವಲ್ಪ ಕಷ್ಟ ಅನಿಸುತ್ತದೆ. ಆದರೂ ರೂಪವತಿಯಾದ ಹೆಣ್ಣಾಗಿದ್ದರಿಂದ ತುಂಬಾ ಪ್ರೀತಿಸುತ್ತಿದ್ದ. ಆದರೆ ಅವಳು ಸ್ವಲ್ಪ ದಿನದವರೆಗೆ ಇದ್ದು ಅವನ ಹತ್ತಿರವಿರುವ ಎಲ್ಲಾ ಅಮೂಲ್ಯ ವಸ್ತುಗಳನ್ನು ದೋಚಿಕೊಂಡು ರಿಕ್ಷಾವಾಲ್ ಜೊತೆಗೆ ಓಡಿ ಹೋಗಿದ್ದಳು.

ಹೆಣ್ಣು ಒಂದು ಮೂಕಪ್ರಾಣಿ, ನಿರ್ಜೀವ ವಸ್ತು ಎಂಬಂತೆ ಈ ಜನಾಂಗದಲ್ಲಿ ನೋಡಿಕೊಳ್ಳಲಾಗುತ್ತಿದೆ. ಇಂತಹ ಅನಿಷ್ಠ ರೂಢಿ ಪದ್ಧತಿಗಳ ಮಧ್ಯದಲ್ಲಿಯೇ ಕೊರವರ ಹಿರಿಯ ಅನಕ್ಷರಸ್ಥನಾಯಕ ಕುರುಮಯ್ಯ ಸ್ತ್ರೀಪರವಾದ ಮಾತುಗಳನ್ನಾಡುತ್ತಾನೆ.

“ಹೆಂಗಸರಿಗೆ ಮನ್ಯಾಗ ಉಣುಕ, ಉಡಾಕ, ಏಟಿದ್ರೇನು....... ಅಸಲು ಇರುದಿದ್ರೇನು?”[೧೬] ಎಂದು ಯೋಚಿಸುವ ಇವನು ಹೆಣ್ಣಿನ ಬಗೆಗಿನ ಕಾಳಜಿಯುಳ್ಳವನಾಗಿ ಕಾಣುತ್ತಾನೆ. ಶೋಷಿತ ಸ್ತ್ರೀಯರಾದ ಬುಡ್ಡಮ್ಮ ಮತ್ತು ತಾಯೇರಿಯವರ ಪರವಾದ ಕಾಳಜಿಯನ್ನು ವ್ಯಕ್ತಪಡಿಸಿ ತಮ್ಮಲಿದ್ದ ಕೆಟ್ಟ ಸಂಪ್ರಾದಯದ ಬಗ್ಗೆ ತಿರಸ್ಕಾರಭಾವವನ್ನು ತೋರ್ಪಡಿಸುತ್ತಾನೆ.

ಆದರೂ ಈಗ ಕುರುಮಯ್ಯ ಯಾರ ಪರ ನ್ಯಾಯ ಹೇಳಬೇಕು ಎಂಬ ಪ್ರಶ್ನೆ ಅವನ ಅಂತರಾತ್ಮದಲ್ಲಿ ಹುಟ್ಟಿದರೂ ಅದು ವ್ಯಕ್ತಿಗತ ನಿಲುವಾಗಿದೆ, ಅದು ಪಂಚಾಯ್ತಿಗಲ್ಲ. ಕೂಡಿದ ಪಂಚಾಯ್ತಿ ಕೊರವ ವ್ಯವಸ್ಥೆ ಪ್ರಕಾರ ನ್ಯಾಯದ ತೀರ್ಪು ನೀಡಬೇಕು. ಕೆಲವು ಬುದ್ಧಿಮಾತು ಇಬ್ಬರಿಗೂ ಹೇಳುತ್ತಾರೆ. ಆ ಸಂದರ್ಭದಲ್ಲಿ ಮಾರಪ್ಪ ಅನೈತಿಕತೆಯ ಸಂಬಂಧದಿಂದಾಗಿ ಅವಳ ಜೊತೆಗೆ ಸಂಸಾರ ಮಾಡಲು ತಿರಸ್ಕರಿಸುತ್ತಾನೆ. ಆ ಸಂದರ್ಭದಲ್ಲಿ ಬುಡ್ಡಮ್ಮನ ಜೊತೆಗೆ ಸಂಬಂಧವಿಟ್ಟುಕೊಂಡ ಜಂಬಯ್ಯ ಮಾರಪ್ಪನಿಗೆ ಎರಡು ನೂರು ರೂಪಾಯಿ ಕೊಟ್ಟನು. ನ್ಯಾಯ ಪಂಚಾಯ್ತಿತಿಗೆ ಸೇರಿದ ಎಲ್ಲರಿಗೂ ವಗ್ಗರಣೆ, ಚಹ–ಪಾನಿಯ, ಹೆಂಡದ ಖರ್ಚು ಜಂಬಯ್ಯ ಕೊಡಬೇಕು ಎಂದು ಹೇಳಿದರು. ಇವತ್ತಿನಿಂದ ಬುಡ್ಡಮ್ಮ ಮಾರಪ್ಪನ ಹೆಂಡತಿಯಲ್ಲ, ಜಂಬಯ್ಯನ ಹೆಂಡತಿಯಾಗಿದ್ದಾಳೆ. ಅದ್ದರಿಂದ ಅವನ ಹತ್ತಿರವಿರಬೇಕು ಎಂದು ಹೇಳಿದರು. ಇದು ‘ಪಂಚ ಪರಮೇಶ್ವರರು ಹೇಳಿದ ಮಾತು ಕಲ್ಲ ಮೇಲಿನ ಅಕ್ಷರದಂತೆ’ ಈ ಶಾಸನ ದೈವದ ನಿರ್ಣಯವಾಗಿದೆ ಇದನ್ನು ಮೀರಿದವರನ್ನು ಕುಲದಿಂದ ಹೊರಗೆ ಇಡಲಾಗುತ್ತದೆ. ಇಂತಹ ವ್ಯವಸ್ಥೆ ಈ ಸಮುದಾಯದಲ್ಲಿ ಇರುವುದನ್ನು ಇಲ್ಲಿ ಲೇಖಕರು ಅನಾವರಣಗೊಳಿಸಿದ್ದಾರೆ.

### ಹೆಣ್ಣಿನ ಬವಣೆ

ಸಮಾಜದ ಬಹುತೇಕ ಎಲ್ಲೆಡೆ ಮಹಿಳೆ ಎರಡನೆಯ ದರ್ಜೆಯ ಪ್ರಜೆಯಂತೆ ಬದುಕುತ್ತಿದ್ದಾಳೆ. ಮಹಿಳೆಯ ಬದುಕಿನ ಅಸ್ತಿತ್ವವೆಲ್ಲಾ ಸಾಮಾಜಿಕ ಚೌಕಟ್ಟಿನ ಬಂಧನ ಅವಳನ್ನು ಸುತ್ತುವರಿದಿದೆ. ಸ್ತ್ರೀಯರನ್ನು ತುಳಿಯುವ, ದಮನ ಮಾಡುವ, ಶೋಷಣೆ ಮಾಡುವ ಪ್ರವೃತ್ತಿ ಪುರುಷರಲ್ಲಿ ಪರಂಪರೆಯಾಗಿ ಬೇರೂರಿದೆ. ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳೇ ತುಂಬಿದೆ. ಇಂತಹ ನೆಲೆಗಟ್ಟಿನಲ್ಲಿ ಮಹಿಳೆಯರು ಪುರುಷರೊಂದಿಗೆ ಸಮಾನ ಸ್ಥಾನಮಾನ ಪಡೆಯಲು ಸಾಧ್ಯವಾಗಿಲ್ಲ. ಹುಟ್ಟುವ ಮುಂಚಿನಿಂದಲೂ 'ಹೆಣ್ಣು ಹಡೆಯಲು ಬ್ಯಾಡ ಹೆರವರಿಗೆ ಕೊಡಬೇಡ' ಎಂಬ ಸೂಚನೆಯ ಎಚ್ಚರಿಕೆಯೊಂದಿಗೆ ಭೂಮಿಗೆ ಬರುವ ಹೆಣ್ಣುಮಗುವಿಗೆ ಅಲ್ಲಿಂದಲೇ ಅವಳಿಗೆ ಅಸ್ತಿತ್ವದ ಪ್ರಶ್ನೆ ಹುಟ್ಟುತ್ತಿದೆ ಇಂತಹ ಸಂದರ್ಭದಲ್ಲಿ ಸ್ತ್ರೀಯು ಸ್ವತಂತ್ರವಾಗಿರಲೂ ಸಾಧ್ಯವಾಗಿಲ್ಲ. ಇಂತಹ ಪರಿಸ್ಥಿತಿಗಳಿಂದ ತಳಸಮುದಾಯಗಳು ಹೊರತಾಗಿಲ್ಲ.

ಪುರೋಹಿತಶಾಹಿ ವ್ಯವಸ್ಥೆ ಮತ್ತು ಬಂಡವಾಳಶಾಹಿಗಳು ಸ್ತ್ರೀಯನ್ನು ಗೃಹಬಂಧನದಲ್ಲಿರಿಸಿದರೆ, ತಳವರ್ಗದ ಸ್ತ್ರೀಯನ್ನು ಸಾಮಾಜಿಕ ಬಂದಿಖಾನೆಯಲ್ಲಿ ಇಟ್ಟು ಶೋಷಣೆಗೆ ಗುರಿಪಡಿಸಿದ್ದಾರೆ. "ದಲಿತ ಸ್ತ್ರೀಯನ್ನು ಹಾಡು ಹಗಲು ನಡುಬೀದಿಯಲ್ಲಿ ಎಳೆದಾಡಿದರೂ ಯಾರೂ ಕೇಳುವುದಿಲ್ಲ. ಆದರೆ ಅಂತ್ಯಜ ಪುರುಷನೊಬ್ಬ ಕುಲಜರ ಸ್ತ್ರೀಯನ್ನು ಮುಟ್ಟಿದ್ದೇ ಆದರೆ ಅವನನ್ನು ನಡು ಊರಲ್ಲಿ ಜೀವಂತ ಸುಟ್ಟರೂ ಯಾರೂ ನೋಡುವುದಿಲ್ಲ! ಭಾರತ ದೇಶದಲ್ಲಿ, ಅಸ್ಪೃಶ್ಯರ ವೈರಿ ಬಡತನವಲ್ಲ, ಅನಕ್ಷರತೆಯಲ್ಲ, ಅಜ್ಞಾನವೂ ಅಲ್ಲ. ಅವರ ಏಕಮೇವ ಕಡುವೈರಿಯೆಂದರೆ ಚಾತುರ್ವಣ ಜಾತಿಪದ್ಧತಿ ಆಚರಿಸುವ ಹಿಂದೂಧರ್ಮ"[೧೭] ಎಂಬುದು ಕುಮಾರ ಕಕ್ಕಯ್ಯ ಪೋಳರವರ ನಿಲುವಾಗಿದೆ. ಪುರೋಹಿತಶಾಹಿಯು ಯಾವುದೋ ಚಾರಿತ್ರಿಕ ಸಂದರ್ಭದಲ್ಲಿ ತನ್ನ ಅನುಕೂಲಕ್ಕಾಗಿ ರೂಢಿಸಿಕೊಂಡಿರುವ ಈ ಶಾಸನ ಆಧುನಿಕ ಯುಗದಲ್ಲಿ ಭಿನ್ನ ಸ್ವರೂಪವನ್ನು ಪಡೆದುಕೊಂಡು ಜೀವಂತವಾಗಿರುವುದು ಕಂಡುಬರುತ್ತದೆ. ಇಂತಹ ಬವಣೆಗಳು ಕೊರವ ಸಮುದಾಯದಲ್ಲಿ ಸಹ ಸಂಭವಿಸಿವೆ. ಇಂತಹ ಅನೇಕ ಸಂಗತಿಗಳನ್ನು ಕಾಣುತ್ತೇವೆ.

### ಕೊರವ ಸಮುದಾಯದಲ್ಲಿ ಹೆಣ್ಣನ್ನು ಮಾರುವ ಪದ್ಧತಿ

ಕೊರವ ಸಮುದಾಯದಲ್ಲಿ ಬೇಡವಾದ ಹೆಂಡತಿಯನ್ನು ಗಂಡ ಮಾರುವಂತಹ ಅಮಾನುಷ್ಯವಾದ ಪದ್ಧತಿ ಇವರ ಸಂಸ್ಕೃತಿಯಲ್ಲಿದೆ. ಅನಕ್ಷರತೆಯಿಂದ ಕೂಡಿದ ಈ ಸಮುದಾಯ ಇಂತಹ ಅನಿಷ್ಟ ಪದ್ಧತಿಯನ್ನು ಉಳಿಸಿಕೊಂಡು ಬಂದಿದ್ದಾರೆ. ಇಲ್ಲಿ ಹೆಣ್ಣು ಒಂದು ಭೋಗದ ವಸ್ತುವಾಗಿ ಮತ್ತು ಮಾರಾಟದ(ಸರಕು) ವಸ್ತುವಾಗಿ ಪ್ರತಿರೂಪಿತಳಾಗಿದ್ದಾಳೆ. ಹೆಣ್ಣು ದನ-ಕರುಗಳಂತೆ ಮೂಕ ಪ್ರೇಕ್ಷಕಳಾಗಿ ನಿಂತಿದ್ದಾಳೆ. ಗಂಡಿನ ಅಂಕೆಯಲ್ಲಿ ಸಿಲುಕಿ ಸಂಕಷ್ಟದಿಂದ

ಪರಿತಪಿಸುವಂತಹದು ತೋರುತ್ತದೆ. ಅವಳಿಗೆ ಯಾವುದೇ ಸ್ವಾತಂತ್ರ್ಯವಿಲ್ಲದಿರುವುದು ಕಂಡುಬರುತ್ತದೆ. ಅವಳ ಭಾವನೆ, ಸಂವೇದನೆಗಳು ಮರೆಮಾಚಿ ಹೋಗಿದ್ದಂತಹವಾಗಿವೆ. ಈ ಜನಾಂಗದ ಪುರುಷರು ಸಂದರ್ಭೋಚಿತವಾಗಿ ಮಾರಾಟ ಮಾಡುತ್ತಾರೆ. ಯರಗೇರಿ ಬುಡ್ಡಪ್ಪನು ಸಾಲ ತೀರಿಸದೇ ಕುರುಮಯ್ಯನಿಗೆ ಹೆಂಡತಿಯನ್ನು ಮಾರುವನು. ಮಾರಪ್ಪನು ಹೆಂಡತಿ ಅನೈತಿಕ ಸಂಬಂಧವಿದೆಯೆನ್ನುವದಕ್ಕಾಗಿ ಮಾರುತ್ತಾನೆ. ಜಂಬಯ್ಯ ಅವಳನ್ನು ಕೊಂಡ ಮೇಲೆ ತನ್ನ ಬೇಜವಾಬ್ದಾರಿತನದಿಂದ ಸಾಲದ ಮೇಲೆ ಸಾಲ ಬೆಳೆಯುತ್ತದೆ. ಇದಕ್ಕೆ ಅವಳ ಕಾಲಗುಣ ಚೆನ್ನಾಗಿಲ್ಲ ಎಂದು ಅವಳನ್ನು ಸಾವುಕಾರ ಮುದುಕ ತಾಯಪ್ಪನಿಗೆ ಮಾರುತ್ತಾನೆ. ಇಂತಹ ವಾಸ್ತವದ ಸಂಗತಿ ಈ ಕಾದಂಬರಿಯಲ್ಲಿ ಅಭಿವ್ಯಕ್ತವಾಗಿದೆ. ಈ ಹೊತ್ತಿನ ಸಂದರ್ಭದಲ್ಲಿ ಹೊರಜಗತ್ತಿನ ಅರಿವನ್ನು ಬಲ್ಲವರಾದ ಕೊರವರು ಇಂತಹ ಭಯಾನಕ ಪದ್ಧತಿಯನ್ನು ಉಳಿಸಿಕೊಂಡು ಬಂದಿದ್ದಾರೆ! ಹೆಂಗಸಿಗೆ ಈ ತರದ ಶೋಷಣೆ ಜೀವವಿರೋಧಿ ವ್ಯವಸ್ಥೆಯಾಗಿದೆ ಎಂಬುದನ್ನು ತನ್ನದೇ ಆದ ನಿಲುವಿನಲ್ಲಿ ಚಿಂತಿಸುತ್ತಾನೆ. ಕುರುಮಯ್ಯನಿಗೆ ದುಃಖವಿದೆ. ಆದರೆ ತನ್ನ ಸಂಸ್ಕೃತಿಯಲ್ಲಿ ಇವರು ಈ ಕೆಟ್ಟ ವ್ಯವಸ್ಥೆಯನ್ನು ಮುರಿಯುವುದು ಅವನಿಗಾಗಲಿ ಅವನ ಮಂದಿಗಾಗಲಿ ಸಾಧ್ಯವಿಲ್ಲ. ಇಂತಹ ವ್ಯವಸ್ಥೆಯನ್ನು ಪುರೋಹಿತಶಾಹಿ ಕಾಮುಕ ಮನಸ್ಸಗಳು ತಮ್ಮ ಲೈಂಗಿಕ ತೃಪ್ತಿಗಾಗಿ ಕೆಳಸಮುದಾಯವನ್ನು ಬಳಸಿಕೊಂಡ ಕ್ರಮವನ್ನು ಲೇಖಕರು ಗಮನಿಸಿದ್ದಾರೆ. ಅದನ್ನು ಮೀರುವ ಸಾಹಸಕ್ಕೆ ಮುಂದಾಗಿದ್ದಾರೆ. ಇಲ್ಲಿ ಪರಂಪರಾಗತವಾಗಿ ಪುರುಷರ ದಬ್ಬಾಳಿಕೆಯನ್ನು ಸಹಿಸಿಕೊಂಡು ಬಂದಿರುವ ಸ್ತ್ರೀಯರು ತಮ್ಮ ಬಂಡಾಯದ ಧ್ವನಿಯನ್ನು ವ್ಯಕ್ತಪಡಿಸಿರುವುದು ಕಂಡುಬರುತ್ತದೆ. ಇಲ್ಲಿ ಅಸಹಾಯಕವಾದ ಸ್ತ್ರೀ ಪಾತ್ರಗಳಿಗೆ ಜೀವ ತುಂಬುವ ಕಾರ್ಯವನ್ನು ಕಾದಂಬರಿಕಾರರಲ್ಲಿ ಗುರುತಿಸಬಹುದಾಗಿದೆ. ಇಲ್ಲಿ ತಾಯೇರಿಯನ್ನು ಆಕೆಯ ತಂದೆ ಸಾವುಕಾರ ತಾಯಪ್ಪನಿಗೆ ಹಣಕ್ಕಾಗಿ ಮಾರುತ್ತಾನೆ. ಆದರೆ ತಾಯೇರಿಗೆ ಇದನ್ನು ಸಹಿಸಲಾಗುವುದಿಲ್ಲ, ತಾನು ಪ್ರೀತಿಸಿದ ಬುಡ್ಡಣ್ಣನ ಜೊತೆಗೆ ಓಡಿ ಹೋಗಲು ಸಿದ್ಧಳಾಗುತ್ತಾಳೆ, ಕೆಂಚಮಾರಮ್ಮನ ಜಾತ್ರೆಯ ದಿನ ಇದಕ್ಕೆ ಸಕಾಲವೆಂದು ಅರಿತು ಬುಡ್ಡಣ್ಣನ ಜೊತೆಗೆ ಕೂಡುತ್ತಾಳೆ. ಇಲ್ಲಿ ತಾಯೇರಿ ಕೊರವರ ಸಂಪ್ರದಾಯ ಮತ್ತು ವ್ಯವಸ್ಥೆಯನ್ನು ಮುರಿದಳೆಂದು ಪಂಚಾಯ್ತಿ ಕರೆಯುತ್ತಾರೆ. ಎಲ್ಲರ ಎದುರು ಬಂಡಾಯದ ಧ್ವನಿ ಎತ್ತುತ್ತಾಳೆ. ಅದು "ನೀನ್ಹೇಳಿದಂತೆ ಆ ಮುದಕಗ ಮಾಡುಕೊಂಡ, ಸಾಯ್ಲುಯಯ್ಯನ; ನಮ್ ಕುರ್ಮಯ್ಯ ಯ್ಯಾನ ಎರಡ್ನೆ ಹೇಣ್ತೀ ಗಂಗಕ್ಕ ಓಡಿ ಹ್ವಾದಾಂಗ ನಾನು ಸೈತ ಯಾರ್ಜತೆನ್ನ ಓಡಿ ಹೋಗಲೊ?"[೧೮] ಎಂದು ತನ್ನ ಅಂತರಾಳದ ಯಾತನೆಯನ್ನು ವ್ಯಕ್ತಪಡಿಸಿದಳು. ಇಲ್ಲಿ ತಾಯೇರಿ ತಮ್ಮ ವ್ಯವಸ್ಥೆಗೆ ಪ್ರಶ್ನೆ ಹಾಕುತ್ತಾಳೆ. ಈ ಸಮುದಾಯದ ನಾಯಕ ಕುರುಮಯ್ಯನಿಗೆ ಸವಾಲುಹಾಕಿ ಅವರನ್ನು ಜರಿಯುತ್ತಾಳೆ. ಇಂತಹ ಪ್ರಗತಿಪರವಾದ ಚಿಂತನೆಯನ್ನು ಕಾದಂಬರಿಕಾರರು ಹೊರಹಾಕುವ ಪ್ರಯತ್ನವನ್ನು ಇಲ್ಲಿ ಕಾಣುತ್ತೇವೆ.

ಹಾಗೆ ಇನ್ನೊಂದು ಸ್ತ್ರೀ ಪಾತ್ರವಾದ ಬುಡ್ಡಮ್ಮ ರೋಗಿಷ್ಟ ಗಂಡನಿಂದ ಪಡೆಯಲಾಗದ ಮೂಲಭೂತ ಸುಖವನ್ನು ಪರಪುರುಷನಾದ ಜಂಬಯ್ಯನಿಂದ ಪಡೆಯುತ್ತಾಳೆ. ಇಲ್ಲಿ ಅನೈತಿಕ ಸಂಬಂಧವೆಂದು ತಿರಸ್ಕರಿಸಿದ ಮಾರಪ್ಪ ನ್ಯಾಯಿಕ ವ್ಯವಸ್ಥೆಯಲ್ಲಿ ಮಾರಪ್ಪನಿಂದ ಬಿಡುಗಡೆ ಪಡೆದು ಜಂಬಯ್ಯನೊಂದಿಗೆ ಅವಳನ್ನು ಕೂಡಿಸುತ್ತಾರೆ. ಇಲ್ಲಿ ಸಹ ಪುರೋಹಿತಶಾಹಿಯಂತೆ ಹೆಣ್ಣನ್ನು ಕೇವಲ ಭೋಗದ ವಸ್ತುವಿನಂತೆ ನಡೆಸಿಕೊಳ್ಳುವ ಕ್ರಮ ಕಂಡುಬರುತ್ತದೆ. ಅಲ್ಲದೆ ತನ್ನ ಹೆಂಡತಿ ತನಗೆ ಎದುರಾದಳು ಎಂಬ ಕಾರಣಕ್ಕೆ ಸಾವುಕಾರ ತಾಯಪ್ಪನಿಗೆ ನಾಲ್ಕು ನೂರು ರೂಪಾಯಿಗಳಿಗೆ ಬುಡ್ಡಮ್ಮನನ್ನು ಮಾರಿಬಿಡುತ್ತಾನೆ. ಇಲ್ಲಿ ಅಸಹಾಯಕಳಾದ ಬುಡ್ಡಮ್ಮನಿಗೆ ಧೈರ್ಯವನ್ನು ಪ್ರತಿಭಟಿಸುವ ಯಾವುದೇ ಮಾರ್ಗವಿಲ್ಲದ ಕಾರಣ ತನ್ನ ಮಗನೊಂದಿಗೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಈ ವ್ಯವಸ್ಥೆಗೆ ತಾಯೇರಿಯು ಒಂದು ನೆಲೆಯಲ್ಲಿ ಪ್ರತಿಭಟನೆ ಮಾಡಿದರೆ, ಬುಡ್ಡಮ್ಮ ಆತ್ಮಹತ್ಯೆಗೆ ಶರಣಾಗುವ ಮೂಲಕ ವ್ಯವಸ್ಥೆಯನ್ನು ವಿರೋಧಿಸುವುದು ಕಂಡುಬರುತ್ತದೆ.

ಹೀಗೆ ಇನ್ನೊಂದು ಸ್ತ್ರೀಪಾತ್ರ ಕುರುಮಯ್ಯನ ಹೆಂಡತಿ ಹನುಮವ್ವ ಕೂಡ ಅಮಾನುಷ ವ್ಯವಸ್ಥೆಯ ವಿರುದ್ಧ ಪ್ರತಿರೋಧದ ಧ್ವನಿಯನ್ನು ಎತ್ತುತ್ತಾಳೆ.

"ಹೆಂಗಸರಾಗಿ ಹುಟ್ಟ ಬಾರ್ದು, ಹುಟ್ಟಿದ್ರೆ ಸೈತೆ ಕೊರವ ಮಂದ್ಯಾಗ ಹುಟ್ಟಬಾರ್ದುದು ಯಾಕ ಹುಟ್ಸಿದನೋ ಆ ದ್ಯಾವ್ರು..... ಅವ್ನ ಗುಡಿಗೀಟು ಮಣ್ಣಾಕ ಕಲ್ಲಾಕ"[೧೯] ಎಂಬ ಅರಿವನ್ನು ಪಡೆದಿದ್ದಾಳೆ. ಇವಳ ಈ ಮಾತಿನ ಹಿಂದೆ ಕೊರವ ಹೆಂಗಸಿನ ಚರಿತ್ರೆಯೇ ತುಂಬಿಕೊಂಡಿದೆ. ಮಾರಪ್ಪ ದೇಹಸುಖವನ್ನು ನೀಡದೆ ಅಸಮಾಧಾನ ಮಾಡುತ್ತಾನೆ. ಅವಳಿಗೆ ನೋವು ನೀಡುತ್ತಾನೆ. ಹಾಲು ಕುಡಿಯುವ ಕೂಸನ್ನು ಅವಳಿಂದ ದೂರ ಮಾಡುತ್ತಾನೆ. ಇದರಿಂದ ಅವಳು ಸಂಕಟ ಪಡುತ್ತಾಳೆ ಮತ್ತು ಜಂಬಯ್ಯ ಅವಳನ್ನು ಕೊಂಡುಕೊಂಡ ಮೇಲೆ ಬೇಜವಾಬ್ದಾರಿತನದಿಂದ ಮಾಡಿದ ಸಾಲದ ಹೊರೆ ಹೆಚ್ಚಾಗಿ ಬೆಳೆಯುತ್ತದೆ. ಇದರಿಂದ ಇವಳ ಕಾಲಗುಣ ಚೆನ್ನಾಗಿಲ್ಲವೆಂದು ಹೊಡೆಯುವುದು, ಕಿರುಕುಳ, ನೋವನ್ನು ಕೊಟ್ಟು ಕೊನೆಗೆ ಸಾವುಕಾರ ಮುದುಕ ತಾಯಪ್ಪನಿಗೆ ಮಾರುತ್ತಾನೆ. ಇಂತಹ ನೋವನ್ನು ಸಹಿಸದೆ ಜಂಬಯ್ಯನಿಗೆ ಪರಿಪರಿಯಾಗಿ ಬೇಡುತ್ತಾಳೆ. ಇವನು ಕೊಡುವ ಕಿರುಕುಳ, ಕಷ್ಟ ಸಹಿಸಿಕೊಂಡು ಇವನ ಜೊತೆಗೆ ಬದುಕು ಮುಂದುವರಿಸಲು ಬಯಸುತ್ತಾಳೆ ಹೊರತು ಮತ್ತೊಬ್ಬನ ಹೆಂಡತಿಯಾಗಿ ಹೋಗುವುದಕ್ಕೆ ಇಷ್ಟಪಡುವುದಿಲ್ಲ. ಇದರಿಂದ ಮನನೊಂದ ಬುಡ್ಡಮ್ಮ ಮೊದಲ ಗಂಡ ಮಾರಪ್ಪನಲ್ಲಿರುವ ತನ್ನ ಮಗುವನ್ನು ಕದ್ದುಕೊಂಡು ಬಂದು ಆ ಮಗುವಿನ ಜೊತೆಗೆ ಸಾಯುತ್ತಾಳೆ. ಇಲ್ಲಿ ಈ ಪಾತ್ರದ ಅಸಹಾಯಕತೆಯನ್ನು ಗುರುತಿಸಿದ್ದಾರೆ ಲೇಖಕರು.

ಅಲ್ಲದೆ "ಹೆಣ್ಣುಗೂಸುಗಳೆಂದ್ರ ದನಗಳು ಆಗ್ಯಾರ ನಿಮ್ ಪಾಲಿಗೆ.... ಮನ್ಸಿಗೆ ಬಂದ್ರೆ ಮನ್ಯಾಗಿಟ್ಟು ಕಳ್ಯಾಕ, ಬ್ಯಾಡಂದ್ರೆ ಮಾರಕ."[೨೦] ಬುಡ್ಡಮ್ಮನ ಶವದ ಮುಂದೆ ಕುಳಿತ ಸಂದರ್ಭದಲ್ಲಿ

ಇಡೀ ತಮ್ಮ ವ್ಯವಸ್ಥೆಯನ್ನು ಬಹಿಷ್ಕರಿಸುತ್ತಾಳೆ. ಇಲ್ಲಿ ಹೆಣ್ಣಿನ ಸಂವೇದನೆಗಳಿಗೆ ಜೀವ ತುಂಬುವ ಪ್ರತಿಭಟಿಸುವ ಶಕ್ತಿಯನ್ನು ತನ್ನ ವೈಚಾರಿಕ ನಿಲುವುಗಳ ಮೂಲಕ ಕಾದಂಬರಿಕಾರರು ವ್ಯಕ್ತಪಡಿಸಿದ್ದು ಕಂಡುಬರುತ್ತದೆ. ಮತ್ತೊಂದು ಕಡೆಗೆ ಇಲ್ಲಿನ ಸಮುದಾಯದ ಹೆಣ್ಣು ತನ್ನ ಅಸಹಾಯಕತೆಯಿಂದ ವ್ಯವಸ್ಥೆಯಲ್ಲಿ ಬಲಿಯಾಗುತ್ತಿರುವ ವಾಸ್ತವದ ಚಿತ್ರಣ ಇಲ್ಲಿ ಕಂಡುಬರುತ್ತದೆ. ಕಳ್ಳತನ ಮಾಡಿ ಜೈಲು ಸೇರಿದ ಜಂಗಪ್ಪನ ಕುಟುಂಬವನ್ನು ನಿರ್ವಹಿಸುವ ಜವಾಬ್ದಾರಿ ಆತನ ಮಗಳು ಮಂಗಮ್ಮನ ಹೆಗಲ ಮೇಲೆ ಇರುತ್ತದೆ. ಇಲ್ಲಿ ಇವಳು ತನ್ನ ದೇಹ ಮಾರಿಕೊಂಡು ಹಸಿವನ್ನು ನೀಗಿಸಲು ಮುಂದಾಗುತ್ತಾಳೆ. ಇದನ್ನು ತಿಳಿದ ಕುರುಮಯ್ಯ ಆಕೆಗೆ ಬುದ್ಧಿಹೇಳಿ ಜಂಬಯ್ಯನ ಜೊತೆಗೆ ಮದುವೆ ಮಾಡಲು ಮುಂದಾಗುತ್ತಾನೆ. ಆದರೆ ಅಷ್ಟರೊಳಗೆ ಪೋಲಿಸರ ಕೈಗೆ ಸಿಕ್ಕು ರಿಮ್ಯಾಂಡ್ ಹೋಮ್ ಸೇರುತ್ತಾಳೆ. ಇಲ್ಲಿ ಕಾದಂಬರಿಕಾರ ಒಂದು ಕಡೆ ಹೆಣ್ಣಿಗೆ ಜೀವತುಂಬುವ, ಅತ್ಮಸ್ಥೈರ್ಯ ನೀಡುವ ಕಾರ್ಯ ಮಾಡಿದರೆ ಮತ್ತೊಂದು ಕಡೆ ಅವರ ವ್ಯವಸ್ಥೆಯ ಕ್ರೌರ್ಯ, ಸಂಕಷ್ಟಕ್ಕೆ ಬಲಿಯಾಗುತ್ತಿರುವ ವಾಸ್ತವದ ಚಿತ್ರಣವನ್ನು ಈ ಕಾದಂಬರಿಯಲ್ಲಿ ಅನಾವರಣಗೊಂಡಿರುವುದು ಕಂಡುಬರುತ್ತದೆ.

**ಕೊರವರನ್ನು ಜಾತಿವ್ಯವಸ್ಥೆಯಿಂದ ಶೋಷಣೆ ಮಾಡುವ ಬಗೆ**

ಭಾರತೀಯ ಹಿಂದೂ ಪುರೋಹಿತಶಾಹಿ, ಸನಾತನವಾದಿಗಳು ಒಂದು ಶ್ರೇಣೀಕೃತ ವ್ಯವಸ್ಥೆಯನ್ನು ರೂಪಿಸಿದರು. ಈ ಶ್ರೇಣೀಕರಣದಲ್ಲಿ ಬ್ರಾಹ್ಮಣ, ಕ್ಷತ್ರೀಯ, ವೈಶ್ಯ, ಶೂದ್ರ ನಾಲ್ಕು ವರ್ಗವಾಗಿ ರೂಪಿಸಿಕೊಂಡಿವೆ. ನಂತರ ಇವು ವರ್ಗ ವರ್ಣಗಳಾಗಿ ರೂಪ ತಾಳುತ್ತವೆ. ಸನಾತನವಾದಿಗಳು ತಮ್ಮ ಸ್ಥಾನ, ಪ್ರತಿಷ್ಠೆ ಕಾಪಾಡಿಕೊಳ್ಳುವುದಕ್ಕಾಗಿ ಉಚ್ಚ-ನಿಚ್ಚ ಎಂಬ ಪರಿಕಲ್ಪನೆ ಹುಟ್ಟು ಹಾಕುತ್ತದೆ. ಅದೇ ಮುಂದೆ ವರ್ಣವಾಗಿ, ಜಾತಿಗಳಾಗಿ, ಮಾರ್ಪಾಡು ಹೊಂದಿದೆ. ಬ್ರಾಹ್ಮಣ-ಉನ್ನತವರ್ಗವಾಗಿ ಶ್ರೇಷ್ಠ ಹುದ್ದೆಯನ್ನು ಮತ್ತು ಶೂದ್ರರಾದವರು ಕೀಳಾದ ನಿಕೃಷ್ಟ ವೃತ್ತಿ ಮಾಡಿದರು. ಆದರೆ. ಅದೇ ಮುಂದೆ ತಳಸಮುದಾಯವನ್ನು ಕೆಳಸ್ತರದಲ್ಲಿಟ್ಟು ಉನ್ನತವರ್ಗಗಳು ತಮ್ಮ ಕಾಲಾಳಾಗಿ ದುಡಿಯುವ ಅಧೀನರನ್ನಾಗಿಸಿದೆ. ಇಂತಹ ವೃತ್ತಿ ಮಾಡುವುದರಿಂದ ಮುಟ್ಟಲು ಅನರ್ಹರು ಎಂದು ಪರಿಗಣಿಸಿ ತಮ್ಮಿಂದ ದೂರವಿರಿಸಿದರೂ ಅದಕ್ಕಾಗಿ ಅವರು ಕೇರಿ, ಊರು, ಸಮಾಜದ ಅಂಚಿನಲ್ಲಿ ಬದುಕುವಂತಹದ್ದನ್ನು ಕಾಣುತ್ತೇವೆ.

ಕೊರವರು ಊರ ಅಂಚಿನಲ್ಲಿ ಬದುಕುತ್ತಿದ್ದಾರೆ. ಇವರು ಕನಿಷ್ಠ ವೃತ್ತಿಯಾದ ಹಂದಿ ಸಾಕಾಣಿಕೆ ಮಾಡುವಂತಹ ಜನ. ಒಂದು ಹೊತ್ತಿನ ಗಂಜಿಯು ಸಿಗದ ಸ್ಥಿತಿಯು ಇವರನ್ನು ಕಾಡುತ್ತಿದೆ. ಇಂತಹ ಸ್ಥಿತಿಯ ಸಂದರ್ಭದಲ್ಲಿ ಪ್ರಕೃತಿವಿಕೋಪವಾದ ಮಳೆಯಿಂದ ಇವರ ವಾಸಸ್ಥಾನ ಜಲಾವೃತವಾಗುತ್ತದೆ. ಅಸಹಾಯಕತೆ ಮತ್ತು ನಿರಾಶ್ರಯರಾದ ಕೊರವರು ಗುಡ್ಡದ ಮೇಲಿನ ದೇವಸ್ಥಾನವನ್ನು ಆಶ್ರಯಿಸಿದರು. ಇದು ಪುರೋಹಿತಶಾಹಿ ಧಾರ್ಮಿಕ ವ್ಯವಸ್ಥೆಗೆ

ವಿರುದ್ಧವಾದ ಜಾತಿವ್ಯವಸ್ಥೆಯಾಗಿದೆ. ಅದಕ್ಕಾಗಿ ಆದಿಮ ದಲಿತರಲ್ಲಿ ಅಸ್ಪೃಶ್ಯರು, ಕೊರವರು ಗುಡಿ ಪ್ರವೇಶಿಸಿದರೆ ಗುಡಿ ಅಪವಿತ್ರವಾಗುತ್ತದೆ ಎಂಬ ಹುನ್ನಾರವನ್ನು ಮೇಲುವರ್ಗ ನಿರ್ಮಿಸಿದೆ ಅದನ್ನು ಮೀರಿದ ಕಾರಣಕ್ಕೆ ಇವರು ಕೆಂಗಣ್ಣಿಗೆ ಗುರಿಯಾಗಿ ಶೋಷಣೆಗೆ ಒಳಗಾಗುವುದು ಕಾಣುತ್ತದೆ. ಅಲ್ಲದೆ ಸಾಮಾಜಿಕ ವ್ಯವಸ್ಥೆಯಲ್ಲಿ ತಮ್ಮನ್ನು ಶೋಷಣೆ ಸಂಕಷ್ಟದಲ್ಲಿ ಸಿಲುಕಿಸಿಕೊಂಡಿರುವ ಈ ಜನಾಂಗ ತಮ್ಮ ಸಮುದಾಯದೊಳಗೆ ಜಾತಿಶೋಷಣೆ ಮಾಡುತ್ತದೆ. ಮಾರೆಪ್ಪ ಹಸಿವು ತಾಳದೆ ಕೀಳು ಕುಲವಾದ ಹೊಲೆಮಾದಿಗರ ಮನೆಯಲ್ಲಿ ಬೇಡಿ ತಿನ್ನುತ್ತಾನೆ. ಅದಕ್ಕಾಗಿ ನಿರೂಪಕ ಈ ರೀತಿ ಚಿತ್ರಿಸಿದ್ದಾನೆ. "ಬೇಡಿಕೆಂಡು ತಿನಾಕ ಬ್ಯಾರಿ ಜಾತಿಯುವ್ರ ಮನಿ ಸಿಗಲಿಲ್ಲೇನೋ ನಿನ್ಗ. ಆಕಡಿ ಈಕಡಿ ವೋಗಿ ಸರೀಕ ಮಂದ್ಯಾಗ, ಹೊಲೇರ ಮಂದ್ಯಾಗ ಬೇಡಿ ಕುಕ್ಕ ಕೆಲ್ಸ ಯಾಕ ಮಾಡಿದಿ, ಹಸಿವಾಗಿದ್ರೆ ತಾಂಡೆದ ಮಂದಿಗಿ ಕೇಳಬೇಕಿತ್ತೋ ದೊಡ್ಡ ಕುಲದವ್ರ ಮನ್ಗಿ ವೋಗಬೇಕಿತೋ"[೨೧] ಕಣ ಎಂದು ಹೇಳುವ ಮಾತಿನಲ್ಲಿ ಸಹ ಜಾತಿಶೋಷಣೆಯಿದೆ. ಆಲ್ಲದೆ ಜಾತಿ ಪ್ರಶ್ನೆ ಎತ್ತಿದೆ ಅಥವಾ ತಮ್ಮ ಧರ್ಮವ್ಯವಸ್ಥೆ ವಿರುದ್ಧವಾದದ್ದಾಗಿದೆ. ಅದಕ್ಕಾಗಿ ಕುಲದಿಂದ ಹೊರ ಹಾಕುವಂತಹ ಸಂದರ್ಭವನ್ನು ನಿರೂಪಿಸುವ ಮೂಲಕ ಅವರ ಸಂವೇದನೆಯನ್ನು ಗುರುತಿಸಿದ್ದಾರೆ.

**ಮತಾಂತರ**

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಅಸ್ಪೃಶ್ಯತೆ ಸಂಸ್ಕೃತಿಗೆ ಅಂಟಿಕೊಂಡ ಶಾಪವಾಗಿದೆ. ಹಿಂದೂ ಸನಾತನವಾದಿಗಳು ನಿರ್ಮಿಸಿರುವ ವರ್ಗ, ಜಾತಿ ವ್ಯವಸ್ಥೆಯಿಂದ ಶ್ರೇಷ್ಠ- ಕನಿಷ್ಠ ಎಂಬ ಕಲ್ಪನೆ ಹುಟ್ಟುಹಾಕಿದರು ದಲಿತ ಜನಸಾಮಾನ್ಯರನ್ನು ಕೀಳಾಗಿ ಕಾಣುತ್ತಾ ಕಾಲಾಳುಗಳಾಗಿ ಮಾಡಿಕೊಂಡರು. ಈ ಜಾತಿವ್ಯವಸ್ಥೆ ಹಿಂದೂಧರ್ಮವಾಗಿ ಆದರೆ ಬೇರೆ ಧರ್ಮ ಸಮನ್ವಯತೆಯಿರುವ ಸಮಾಜದಿಂದ ದೂರವಿರುವ ಕಾರಣ ಮತಾಂತರ ಮಾರ್ಗವನ್ನು ತಳಸಮುದಾಯಗಳು ಆರಿಸಿಕೊಂಡಿರುವುದನ್ನು ಕಾಣುತ್ತೇವೆ.

ಮೂಲಭೂತ ಸೌಕರ್ಯಗಳಿಂದ ವಂಚಿತರಾಗಿ ನಾಯಿ-ನರಿಗಳಿಗಿಂತ ಕೀಳುಜೀವನ ನಡೆಸುವಂತಹ ದಲಿತ, ಅದಿಮರಿಗೆ ಕ್ರಿಶ್ಚಿಯನ್ ಧರ್ಮ ನೀಡುವಂತಹ ಪ್ರೋತ್ಸಾಹ, ಸಮಾನತೆಯ ಜೀವನ ಸಿಗುವ ಕಾರಣಕ್ಕೆ ತಳಸಮುದಾಯಗಳು 'ಮತಾಂತರ'ದ ವ್ಯವಸ್ಥೆಯ ಕಡೆಗೆ ಮುಖ ಮಾಡಿವೆ.

ಆಸ್ಪೃಶ್ಯತೆಯ ಸೋಂಕಿನಿಂದ ನರಳಾಡುತ್ತಿರುವ ಈ ಕೊರವ ಸಮುದಾಯವು ಮತಾಂತರ ದಂತಹ ಕ್ರಿಯೆಗೆ ಯಾವುದೇ ಪ್ರತಿರೋಧವನ್ನು ಒಡ್ಡದೆ ಸ್ವೀಕರಿಸುವುದು ಕಂಡುಬರುತ್ತದೆ. ಕುರುಮಯ್ಯನ ಮಗನಾದ ರಾಯಪ್ಪ ಗುಲ್ಬರ್ಗಾದಲ್ಲಿ ಓದುತ್ತಿರುವಾಗ ಅಲ್ಲಿ ಕ್ರಿಶ್ಚಿಯನ್ ಹುಡುಗಿ

ಮೇರಿಯನ್ನು ಪ್ರೀತಿಸಿ ಮದುವೆಯಾಗುತ್ತಾನೆ. ಇಲ್ಲಿ ನಾಯಕನಿಗೆ ತನ್ನ ಮಗ ಅನ್ಯಧರ್ಮಕ್ಕೆ ಸೇರಿರುವ ಬಗ್ಗೆ ಯಾವುದೇ ಅಂತಕ ಭಾವವಿಲ್ಲ. ಆದರೆ "ಮಗ ಓದಿ ಶ್ಯಾಣ್ಯಾಗಿ ಈ ಮುದಿ ಕಾಲಕ ನಮ್ನ ಸೆನ್ನಾಗಿ ನೋಡಿಕಂತಾನ, ತಾಂಡೆದ ಮಂದಿಗೆ ದಾರಿ ತೋರುತ್ತಾನ ಅಂತ, ತಿಳುಕಂಡಿದ್ಯಾ"[31]. ಆಶ್ರಯಭಾವಕ್ಕೆ ಮಾತ್ರ ಆತಂಕ ಭಾವ ವ್ಯಕ್ತವಾಗಿದೆ. ಇಲ್ಲಿ ಕಾದಂಬರಿಕಾರರು ಮತಾಂತರ ಪಲ್ಲಟ ಕಾರ್ಯದ ಮೂಲಕ ಬದಲಾದ ಕಾಲದ ಹೊಸ ಬದುಕಿನತ್ತ ಈ ಕೊರವ ಸಮುದಾಯವನ್ನು ಮುನ್ನಡೆಸುವ ಆಶಯವಾಗಿದೆ ಮತ್ತು ಜಡ್ಡುಗಟ್ಟಿದ ಹಿಂದೂಧರ್ಮದಲ್ಲೇ ಮುಂದುವರಿದರೆ ಈ ಶೋಷಣೆ ತಪ್ಪಿದ್ದಲ್ಲ ಎಂಬುದನ್ನರಿತು ಈ ಕ್ರಿಯೆಗೆ ಮುಂದಾಗಿದ್ದಾರೆ.

**ಕೊರವರ ಮೂಢನಂಬಿಕೆ ಮತ್ತು ಸಂಪ್ರದಾಯಗಳು**

ಕೊರವರು ಮೂಢರಾಗಿರುವುದರಿಂದ ಎಲೆ ಮರೆಯ ಕಾಯಿಯಂತೆ ತಮ್ಮದೆಯಾದ ಚೌಕಟ್ಟಿನಲ್ಲಿ ಬದುಕುವ ಅಲೆಮಾರಿ ಜನಾಂಗವಾಗಿದೆ. ಅಂತಹ ಸಮುದಾಯಗಳು ಪಾರಂಪರಿಕವಾಗಿ ಕೆಲವು ಅಮಾನುಷವಾದ ಮೂಢ ಸಂಪ್ರದಾಯಗಳನ್ನು ತಮ್ಮ ಸಾಂಸ್ಕೃತಿಕ ಜೀವನಕ್ರಮದಲ್ಲಿ ರೂಪಿಸಿಕೊಂಡಿರುತ್ತವೆ. ಅದರಂತೆ ಕೊರವ ಸಮುದಾಯವು ಮೂಢ ಸಂಪ್ರದಾಯಗಳಾದ ಪ್ರಾಣಿಬಲಿ, ಬೆತ್ತಲೆಸೇವೆ, ಅನಿಷ್ಟ ಸಂಪ್ರದಾಯಗಳನ್ನು ರೂಪಿಸಿಕೊಂಡಿವೆ. ಅವುಗಳನ್ನು ಈ ಕೆಳಗೆ ಗುರುತಿಸಲಾಗಿದೆ.

**ಪ್ರಾಣಿಬಲಿ**

ಕೊರವ ಸಮುದಾಯದ ಮೂಢ ಸಂಪ್ರದಾಯಗಳಲ್ಲಿ ಪ್ರಾಣಿಬಲಿಯು ಒಂದು, ಪ್ರಮುಖವಾದ ಅನಿಷ್ಟ ಪದ್ಧತಿಯಾಗಿದೆ. ಅಲೆಮಾರಿ ಬುಡಕಟ್ಟು ತಳಸಮುದಾಯಗಳು ದಲಿತವರ್ಗ, ಒಬ್ಬ ಗ್ರಾಮದೇವತೆ ಅಥವಾ ಊರದೇವತೆ ಎಂಬ ಆದಿಶಕ್ತಿ(ಹೆಣ್ಣುಶಕ್ತಿ)ಯನ್ನು ಆರಾಧ್ಯ ದೈವವಾಗಿ ರೂಪಿಸಿ ಕೊಂಡಿರುತ್ತಾರೆ. ಹಾಗೆಯೇ ಕೊರವ ಜನಾಂಗದವರು ಕೆಂಚಮಾರಮ್ಮ ದೇವಿಯನ್ನು ಆರಾಧ್ಯ ದೈವವಾಗಿ ಆರಾಧಿಸುತ್ತಾರೆ. ಆದರೆ ಆರ್ಥಿಕ ಸಂಕಷ್ಟ ಎದುರಿಸಿದರೂ ದೇವತೆ ಉಗ್ರವಾಗಿ ಕಾಡುತ್ತಾಳೆ ಎಂಬ ಮೂಢನಂಬಿಕೆಯಿಂದ ಹರಕೆ ಬಿಟ್ಟ ಮೂಕಪ್ರಾಣಿಗಳನ್ನು ವಿಧಿ-ವಿಧಾನಗಳ ಮೂಲಕ ದೇವರಿಗೆ ಬಲಿ ಕೊಡುತ್ತಾರೆ. ಭಕ್ತಿ ಭಾವದಿಂದ ಭಜಿಸುತ್ತಾರೆ. ಆದರೆ ಇಲ್ಲಿ ಆರ್ಥಿಕ ಅಸಮಾನತೆ ಸಂಕಷ್ಟದ ಪರಿಸ್ಥಿತಿ ಎದುರಾಗಿ ಕಾಡಿದರೂ ಕಟಿಬದ್ಧವಾಗಿ ನೆರವೇರಿಸುವ ಅನಿವಾರ್ಯತೆಯನ್ನು ಈ ಕಾದಂಬರಿಯಲ್ಲಿ ಗುರುತಿಸಲಾಗಿದೆ.

**ಬೆತ್ತಲಸೇವೆ**

ಈ ಸೇವೆಯನ್ನು ಸನಾತನವಾದಿಗಳು, ಬಂಡವಾಳಶಾಹಿ ವ್ಯವಸ್ಥೆ ರೂಡಿಸಿಕೊಂಡಿದೆ. ಅಲ್ಲದೆ ದೈವಾರಾಧನೆಯ ನೆಪದಲ್ಲಿ ತಳಸಮುದಾಯದ ಹೆಣ್ಣು-ಗಂಡುಗಳಿಗೆ ಕಾಣಿಕೆಯನ್ನು

ನೀಡುತ್ತಿದ್ದರು. ಇದರಿಂದ ದಲಿತ ಸಮುದಾಯಗಳು ತಮ್ಮ ಆರ್ಥಿಕ ಸಂಕಷ್ಟ ನಿಭಾಯಿಸುವ ಸಲುವಾಗಿ ಇಷ್ಟವಿರದಿದ್ದರೂ ಹಣದ ಆಸೆಗಾಗಿ ಈ ಅಮಾನುಷ ಪದ್ಧತಿಯನ್ನು ಅನುಸರಿಸಿದರು. ಆದರೆ ಈ ಪದ್ಧತಿ ಕೊರವ ಸಮುದಾಯದಲ್ಲಿ ಬೇರೊಂದು ರೂಪವನ್ನು ಪಡದಿದೆ. ಬೆತ್ತಲೆಸೇವೆ ತಮ್ಮ ಮನೋ ಇಚ್ಛೆಗಳ ಈಡೇರಿಕೆಗಾಗಿ ಮಾಡಿಕೊಂಡ ಆಚರಣೆಯಾಗಿದೆ. ಆದರೆ ಇದರಿಂದ ಈ ಜನಾಂಗದ ಬದುಕಿಗೆ ಬೇರೆ ರೀತಿಯ ದುಷ್ಪಪರಿಣಾಮ ಬೀರಿದೆ ಕಾಮುಕ ಪುರುಷರಿಗೆ ಬೆತ್ತಲೆಸೇವೆ ಮಾಡುವ ಹೆಣ್ಣುಮಕ್ಕಳು ಬಲಿಯಾಗುತ್ತಾರೆ. ಇಂತಹ ಅಮಾನವೀಯ ದೈವಿಕ ಆರಾಧನೆ ಉಳ್ಳವರ ಕುಯುಕ್ತಿಯೇ ಆಗಿದೆ. ಅಲ್ಲದೆ ತಾಯೇರಿ ತಾನು ಪ್ರೀತಿಸಿದ ಬುಡ್ಡಪ್ಪನೊಂದಿಗೆ ಮದುವೆಯಾಗುವ ಇಚ್ಛೆ ಈಡೇರಬೇಕು ಮನೆಯವರು ನಿಶ್ಚಯಿಸಿದ ಸಂಬಂಧ ಮುರಿದುಬೀಳಬೇಕು ಎಂಬ ಅವಳ ಮನೊ ಇಚ್ಚೆ ಇಡೇರುವಂತೆ ಹರಿಕೆ ಹೊತ್ತಿದ್ದಳು, ಇವಳ ಇಚ್ಚೆ ಸರಳವಾಗಿ ಈಡೇರುತ್ತದೆ. ಆದರೆ ಸಮುದಾಯದಿಂದ ಬಹಿಷ್ಕರಿಸಿದ ಬುಡ್ಡಪ್ಪನ ಜೊತೆಗೆ ಮದುವೆಯಾಗಿದ್ದರಿಂದ ಸಮುದಾಯದ ಪುರುಷರ ಕೆಂಗಣ್ಣಿಗೆ ತಾಯೇರಿ ಬಲಿಯಾಗುತ್ತಾಳೆ. ಇಂತಹ ಸೇವೆಯನ್ನು ಮಾಡುವ ಅಮಾಯಕ ಹೆಣ್ಣುಮಕ್ಕಳ ಬಾಳು ಸನಾತನವಾದಿ ವ್ಯವಸ್ಥೆ ಮತ್ತು ಸಮುದಾಯದೊಳಗಿನ ವ್ಯವಸ್ಥೆ ಹೆಣ್ಣನ್ನು ಹೇಗೆ ಭೋಗದ ವಸ್ತುವಾಗಿ ಕಾಮುಕ ದೃಷ್ಟಿಯಲ್ಲಿ ನೋಡುತ್ತಾರೆ ಎಂಬುದನ್ನು ಲೇಖಕರು ಸೂಕ್ಷ್ಮವಾಗಿ ಗುರುತಿಸಿರುವುದನ್ನು ಕಾಣುತ್ತೇವೆ.

ಹೀಗೆ ಕುರುವಯ್ಯನಿಗೆ ತನ್ನ ಸಮುದಾಯದ ಇಂತಹ ಅಮಾನುಷ ಪದ್ಧತಿಗಳಾದ ಹೆಣ್ಣುಮಾರುವ ಪದ್ಧತಿ ಮತ್ತು ಬೆತ್ತಲೆಸೇವೆಯಗಳ ಬಗ್ಗೆ ಅಸಮಾಧಾನವಿದೆ. ಆದರೆ ಅದನ್ನು ಧಿಕ್ಕರಿಸುವ ನಿಲುವಿಗೆ ಬರದ ಸಂದಿಗ್ಧತೆಯಲ್ಲಿ ನರಳುತ್ತಾನೆ. ಬುಡ್ಡಮ್ಮ ತನ್ನ ಬದುಕಿನ ಬಗ್ಗೆ ಜಿಗುಪ್ಸೆ ಪಟ್ಟು ಆತ್ಮಹತ್ಯೆ ಮಾಡಿಕೊಂಡು ಸತ್ತರೆ, ಅದೇ ಜನಾಂಗದ ಇನ್ನೊಬ್ಬ ಮಹಿಳೆ ತಾಯೇರಿ ಧೈರ್ಯದಿಂದ ಇಡೀ ವ್ಯವಸ್ಥೆಯನ್ನು ಪ್ರತಿಭಟಿಸುತ್ತಾಳೆ. ಮುದುಕನೊಂದಿಗೆ ಮದುವೆ ತಿರಸ್ಕರಿಸಿ ಪ್ರೀತಿಸಿದ ಗಂಡಸಿನ ಜೊತೆಗೆ ಓಡಿಹೋಗಿ ಮದುವೆಯಾಗುತ್ತಾಳೆ. ಕೇರಿಯ ಮಂದಿ ಜತೆ ಹೊರಾಡಿ ತಪ್ಪಿಸಿಕೊಂಡು ಹೋಗಿರುತ್ತಾಳೆ. ಇದನ್ನು ಕಂಡ ಕುರುಮಯ್ಯ ಚಿಂತಿಸುತ್ತಾನೆ. ತಾಯೇರಿ ಮಾಡಿದ್ದು ಸರಿಯೆಂದು ಒಳಗೊಳಗೆ ಸಮಾಧಾನ ಪಡುತ್ತಾನೆ. ಇತ್ತ ಬುಡ್ಡಮ್ಮ ಸತ್ತಾಗಲೂ ಮರುಗುತ್ತಾನೆ. ಅತ್ತ ಮಾರಪ್ಪನ ಕಷ್ಟವನ್ನು ಕಂಡು ಹಲುಬುತ್ತಾನೆ. ಸ್ವತಃ ತನ್ನ ಮಗ ಓದಲು ಹೋಗಿ ಮರಳಿ ತಾಂಡಕ್ಕೆ ಬರದೆ ಪಾದ್ರಿಯ ಹುಡುಗಿಯನ್ನು ಮದುವೆಯಾದ ಸುದ್ದಿ ಕೇಳಿ ಮಕ್ಕಳಂತೆ ಅಳುತ್ತಾನೆ. ಆದರೆ ಹೆಂಡತಿ ಸಮಾಧಾನಿಯಾಗಿ ಗಂಡನಿಗೆ ಧೈರ್ಯ ಹೇಳುತ್ತಾಳೆ ತನ್ನ ಕಣ್ಣ ಮುಂದೆ ತನ್ನ ಕುಲದವರು ವ್ಯವಸ್ಥೆಯನ್ನು ಮೀರಿ ಹೋದಾಗ ದುಃಖದಿಂದಲೂ, ಬೆರಗಿನಿಂದಲೂ ನೋಡುತ್ತಾನೆ. ಬುಡ್ಡಮ್ಮ ಸತ್ತ ಮೇಲೆ ಅವಳ ಎರಡನೆಯ ಗಂಡ ಜಂಬಯ್ಯ ಒಂಟಿಯಾಗಿದ್ದನ್ನು ನೋಡಿ ಕೇರಿಯ ಮಂಗಮ್ಮಳನ್ನು ಅವನಿಗೆ ಕೊಟ್ಟು

ಮದುವೆ ಮಾಡಿಕೊಳ್ಳಲು ಹೇಳಿ ಅವಳನ್ನು ಮಾರಬಾರದೆಂದು ನಿರ್ಬಂಧ ಹಾಕುತ್ತಾನೆ. ಆದರೆ ಮದುವೆ ಮುನ್ನ ಮಂಗಮ್ಮ ತನ್ನನ್ನು ಅನ್ಯರಿಗೆ ಮಾರಿಕೊಳ್ಳಲು ನಿಂತುಬಿಡುತ್ತಾಳೆ. ತನ್ನವರ ಬದುಕು ಕಟ್ಟಲು ನೋಡಿದಂತೆ ಅದು ಕಾಲದ ಹೊಡೆತಕ್ಕೆ ಸಿಕ್ಕು ಒಡೆದುಹೋಗುತ್ತಲೆ ಇರುತ್ತದೆ.

ಕೊರವರು ತಮ್ಮ ಬದುಕಿಗೆ ಸಂಬಂಧಿಸಿದಂತೆ ಎರಡು ಬಗೆಯಲ್ಲಿ ಸಂಘರ್ಷಕ್ಕೆ ಒಳಗಾದಂತೆ ಕಾಣುತ್ತದೆ. ಒಂದು ತಮ್ಮ ಬದುಕಿನ ರೀತಿ-ನೀತಿ, ಸಂಪ್ರದಾಯ, ಸಂಸ್ಕೃತಿಗಳ ಜತೆ ಒಂದು ಬಗೆಯಲ್ಲಿ ತಾತ್ವಿಕ ಸಂಘರ್ಷಕ್ಕೆ ಒಳಗಾದರೆ, ಇನ್ನೊಂದು ಬಗೆಯಲ್ಲಿ ತಮ್ಮ ಹೊಟ್ಟೆಪಾಡಿಗಾಗಿ ಅನ್ಯರನ್ನು ಅವಲಂಬಿಸಿರುವುದರಿಂದ ಹೊರಜಗತ್ತಿನ ಶಕ್ತಿಗಳ ಜತೆ ಸಂಘರ್ಷಕ್ಕೆ ನಿಂತಿರುವುದು ಕಾಣುತ್ತದೆ. ತಾಯೇರಿ ಮತ್ತು ರಾಯಪ್ಪ ತಮ್ಮ ವ್ಯವಸ್ಥೆಯನ್ನು ಮೀರಿ ಹೋದರು. ಆದರೆ ಕೊರವರನ್ನು ಅಧೀನಕ್ಕೆ ಒಳಪಡಿಸಿಕೊಂಡ ಕುಶಲಪ್ಪನ್ನಂತಹ ಹೊರಶಕ್ತಿಯನ್ನು ಮೀರಿಹೋಗಲು ಉಳಿದವರಿಗೆ ಅಸಾಧ್ಯವಾಗಿದೆ. ಹೊರಗಿನ ಶಕ್ತಿಗಳನ್ನು ಗೆಲ್ಲಬೇಕಾದರೆ ಕೊರವರಿಗೆ ಅಕ್ಷರ ಬೇಕೆನಿಸುತ್ತದೆ. ಅಲ್ಪಸ್ವಲ್ಪ ಕಲಿತ ಕುರುಮಯ್ಯನ ಮಗ ಕೇರಿಗೆ ಮರಳಿ ಬರಲಿಲ್ಲ. ಉಳಿದಂತೆ ಕೇರಿಯಲ್ಲಿ ಇರುವವರೆಲ್ಲ ಅಕ್ಷರಕ್ಕೆ ಸಾವಿರಮೈಲು ದೂರದಲ್ಲಿದ್ದಾರೆ. ಆದರೂ ಸಮಾಜದಲ್ಲಿ ಬದುಕುವ ಅನಿವಾರ್ಯತೆಯನ್ನು ಕಾಣುತ್ತವೆ.

### ಆರ್ಥಿಕ ಸ್ಥಿತಿ

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಪುರೋಹಿತಶಾಹಿ ಮತ್ತು ಜಮೀನ್ದಾರ ವ್ಯವಸ್ಥೆಯ ಶ್ರೇಣೀಕರಣದ ಆಧಾರದ ಮೇಲೆ ವೃತ್ತಿಯನ್ನು ನಿರ್ಮಿಸಿದ ದಲಿತ, ಅದಿಮ, ತಳಸಮುದಾಯಗಳನ್ನು ಕೆಳಸ್ತರದಲ್ಲಿ ಇಟ್ಟಿವೆ. ಅಲ್ಲದೆ ಅವುಗಳಿಗೆ ಮೂಲಭೂತ ಸೌಕರ್ಯಗಳಾದ ಮನೆ, ಶಿಕ್ಷಣ, ಭೂಮಿ ಸಿಗದಂತೆ ಮಾಡಿ ನಿರಾಶಾದಾಯಕರಾಗಿ ಇವರನ್ನು ಕಾಲಾಳುಗಳಾಗಿ ಕಾಣುತ್ತ ಸಮಾಜದಲ್ಲಿ ಯಾವುದೇ ಸ್ಥಾನ-ಮಾನ ದೊರಕದಂತೆ ಕಾಡುತ್ತದೆ.

ಅದರಂತೆ ಕೊರವ ಜನಾಂಗ ಕೀಳುವೃತ್ತಿ ಹಂದಿ ಸಾಕಾಣಿಕೆ ಮತ್ತು ಗುಡಿಕೈಗಾರಿಕೆ ನಂಬಿಕೊಂಡು ಬದುಕುತ್ತದೆ. ಈ ಬುಡಕಟ್ಟು ಜನ ಶ್ರಮಜೀವಿಗಳಾಗಿದ್ದರೂ ಒಂದು ಹೊತ್ತಿನ ಕೊಳಿಗೂ ಪರಿತಪಿಸುವ ಸಂಕಷ್ಟದ ಪರಿಸ್ಥಿತಿ ಈ ತಳಸಮುದಾಯವನ್ನು ಕಾಡುತ್ತಿದೆ.

### ಭಿಕ್ಷಾಟನೆ(ಹಸಿವು)

ಬಡತನ ಮತ್ತು ಹಸಿವು ದಲಿತರಿಗೆ ಮೈಗಂಟಿಕೊಂಡು ಬಂದಂತಿದೆ. ಕೊರವರು ಅಥಾವ ದಲಿತರು ಕೂಲಿಕಾರರಾಗಿ ಜೀತದಾಳಾಗಿ ಉಳ್ಳವರ ಹೊಲಗದ್ದೆಯಲ್ಲಿ ದುಡಿದರೂ ಒಂದು ಹೊತ್ತಿನ ಗಂಜಿಯನ್ನು ಹೊಂದಿಸಿಕೊಳ್ಳಲಾಗದ ಸಂಕಟದ ಪರಿಸ್ಥಿತಿಯಾಗಿದೆ. ಇಂದು ಸಮಾಜದಲ್ಲಿ ಹಣ, ಸಂಪತ್ತು ಮತ್ತು ಆಹಾರಪದಾರ್ಥಗಳು ಶ್ರೀಮಂತ ಜಮೀನ್ದಾರ ಬಂಡವಾಳ ಶಾಹಿಗಳಲ್ಲಿ

ಕ್ರೋಡೀಕರಣಗೊಂಡು ದಲಿತರನ್ನು ಇನ್ನೂ ಬಡವರನ್ನಾಗಿಸಿ ಹೀನಸ್ಥಿತಿಗೆ ತಳ್ಳಿದೆ. ಹಾಸಿಹೊದ್ದ ಬಡತನದಲ್ಲಿ ಒಂದು ಹೊತ್ತಿನ ಹೊಟ್ಟೆ ತುಂಬಿಸಿಕೊಳ್ಳಲಾಗದೆ ಹೆಣಗಾಡುವ ಸ್ಥಿತಿ ಇವರನ್ನು ಭಿಕ್ಷುಕರನ್ನಾಗಿಸಿದೆ ಹಸಿವಿನ ಆವೇಗವನ್ನು ಅವರು ತಾಳದೆ ಇಂತಹ ಕಾರ್ಯಕ್ಕೆ ಮುಂದಾಗಿದ್ದಾರೆ ಇದರಿಂದ ಪ್ರಸುತ್ತ ನಗರಪ್ರದೇಶದಲ್ಲಿ ಭಿಕ್ಷೆ ಬೇಡುವ ಸ್ಥಿತಿಯನ್ನು ಗುರುತಿಸಬಹುದು. ಇಂತಹ ಸ್ಥಿತಿಯಿಂದ ಇವರು ಮುಕ್ತವಾಗಬೇಕಾಗಿದೆ,

'ಹಸಿವಿನ ಬವಣೆಯನ್ನು ಕೆಳವರ್ಗದ ಸಂಸಾರಗಳು ಅದರಲ್ಲೂ ಸಾಕವ್ವನ ಮನೆಯ ಇಡೀ ಕುಟುಂಬದಲ್ಲಿನ ಹಸಿವಿನ(ತೀವ್ರತೆ) ತೊಳಲಾಟವನ್ನು ತೆರೆದಿಡುತ್ತದೆ.'

ಕಾದಂಬರಿಕಾರರು ಕೊರವ ಸಮುದಾಯದ ಹಸಿವಿನ ಬೇಗೆಯನ್ನು ಹೀಗೆ ಚಿತ್ರಿಸಿದ್ದಾರೆ. "ಡಾಗ್ದರ್ ಹೇಳ್ತಾನ ಚೆಲೋ ಚೆಲೋ ತಿನಬೇಕಂತ; ತಿನಾಕ ರೋಟ್ಟಿಸೈತ ಇಲ್ಲ."[೨೩] ಕೊರವ ಸಮುದಾಯ ಬಡತನದಿಂದ ಬಳಲುವಂತಹ ಸ್ಥಿತಿಯನ್ನು ಇದು ಗುರುತಿಸುತ್ತಿದೆ. ಒಂದು ಹೊತ್ತಿನ ಅನ್ನಕ್ಕಾಗಿ ಪರದಾಡುವಂತಹ ಸ್ಥಿತಿಯಲ್ಲಿ ಬದುಕುವಂತಹದು ಚಿಂತಾಜನಕವಾಗಿದೆ. ಮಾರಪ್ಪ ಕ್ಷಯ ರೋಗದಿಂದ ಬಳಲುವ ಕಾರಣದಿಂದ ಹೆಂಡತಿಯ ಮೂಲಭೂತ ಬಯಕೆಯನ್ನು ತೀರಿಸಲಾಗದ ಕಾರಣ ಅವನ ಹೆಂಡತಿಯು ಜೆಂಬಯ್ಯನನ್ನು ಕೂಡಿದಳು ಆಗಾಗಲೇ ತಮ್ಮನನ್ನು ಕಳೆದುಕೊಂಡಿದ್ದನು. ಅದಕ್ಕಾಗಿ ತನ್ನ ಮಗುವಿನ ಜೋತೆಗೆ ಬದುಕುವಾಗ ಅನಾರೋಗ್ಯದ ಕಾರಣ ದುಡಿಯಲಾರ ಸ್ಥಿತಿಯಿಂದ ಸಾಲಗಾರನಾದನು. ಇಂತಹ ಸಂದರ್ಭದಲ್ಲಿ ಕಟಿರೊಟ್ಟಿಯನ್ನು ತಿನ್ನುವನು. ಅದರಿಂದ ಹೊಟ್ಟೆ ತುಂಬದೇ ಹಸಿವಿನ ಆವೇಗ ಹೆಚ್ಚಾಯಿತು. ನಡೆಯಲಾಗದ ನೀರಸ ಸ್ಥಿತಿಯಲ್ಲಿ ಮಾರೆಪ್ಪ ಭಿಕ್ಷೆ ಬೇಡಿ ತಿನ್ನಲು ರಾಯಪುರಕ್ಕೆ ಸಾಗುತ್ತಾನೆ. ಅದನ್ನು ಮುಟ್ಟಲಾಗದೆ ನಡುದಾರಿಯಲ್ಲೇ ಹೊಲೆ-ಮಾದಿಗರ ಮನೆಯಲ್ಲಿ ಭಿಕ್ಷೆ ಬೇಡಿ ತಿಂದು ನೀರು ಕುಡಿದು ತನ್ನ ಹಸಿವಿನ ದಾಹ ತೀರಿಸಿಕೊಳ್ಳುವುದು ಕಾಣುತ್ತದೆ.

ಕೊರವರು ಪ್ರಕೃತಿವಿಕೋಪಕ್ಕೆ ಸಿಲುಕಿದಾಗ ತಮ್ಮ ಅಸ್ತಿತ್ವದ ಸ್ಥಿರಾಸ್ತಿಯನ್ನು ಕಳೆದುಕೊಂಡು ನಿರ್ಗತಿಕರಾದ ಸಮಯದಲ್ಲಿ ಹಸಿವಿನ ಆವೇಗದ ತೊಳಲಾಟ ಕಾಣುವುದು. ಶ್ರಮದಿಂದ ದುಡಿದರೂ ಅದಕ್ಕೆ ತಕ್ಕ ಪ್ರತಿಫಲ ಸಿಗದೆ ಇರುವಾಗ ಅನ್ನಕ್ಕೆ ಪರದಾಡುವರು. ಹೀಗೆ ಈ ಸಮುದಾಯ ಆರ್ಥಿಕ ಅಸಮಾನತೆಯ ಮುಗ್ಗಟ್ಟಿನಿಂದ ಕಳ್ಳತನ, ಮೈಮಾರುವುದು, ಭಿಕ್ಷಾಟನೆ ಕಾರ್ಯಕ್ಕೆ ಅನಿವಾರ್ಯವಾಗಿ ತೊಡಗುವಂತಹುದಾಗಿದೆ. ಆಧುನಿಕ ಬದಲಾವಣೆಯಿಂದ ಇವರು ಮಾಡುವ ಗುಡಿಕೈಗಾರಿಕೆ, ಕರಕುಶಲತೆ, ಕಸುಬು ಸಾಗಿಸುವಂತಹ ಸ್ಥಿತಿಯು ಶೋಚನೀಯವಾಗಿದೆ. ಇವರು ಎಚ್ಚೆತ್ತು ಸಮಾನ ಬದುಕು ಕಟ್ಟಿಕೊಳ್ಳಬೇಕು. ಇಂತಹ ಸಂಕಷ್ಟ ಪರಿಹರಿಸಿಕೊಳ್ಳಲು ಇರುವ ಮೂಲಮಂತ್ರ ಅಕ್ಷರಜ್ಞಾನ ಮುಖ್ಯ ಎನ್ನುವುದನ್ನು ಲೇಖಕರು ಕುರುಮಯ್ಯನ ಚಿಂತನೆಯ ನಿಲುವಾಗಿ ಗುರುತಿಸಿದ್ದಾರೆ.

**ಸಾಮಾಜಿಕ ಪರಿವರ್ತನೆಗೆ ಮೂಲ ಅಸ್ತ್ರವೇ ಅಕ್ಷರಜ್ಞಾನ**

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿನ ಪುರೋಹಿತಶಾಹಿ ಮತ್ತು ಸನಾತನವಾದಿಗಳು ರೂಪಿಸಿದ ಶ್ರೇಣೀಕೃತ ವ್ಯವಸ್ಥೆಯನ್ನು ಮೀರಬೇಕಾದರೆ ಅಕ್ಷರಜ್ಞಾನ ಬೇಕು. ಅಲ್ಲದೆ ದಲಿತ ಆದಿಮ, ತಳಸಮುದಾಯ, ಬುಡಕಟ್ಟುಗಳು ಶಿಕ್ಷಣ ಪಡೆದಾಗ ಮಾತ್ರ ಈ ಇಡೀ ವ್ಯವಸ್ಥೆಯನ್ನು ಅರಿತುಕೊಳ್ಳುವುದರ ಜೊತೆಗೆ ಪ್ರಶ್ನಿಸುವ, ವಿರೋಧಿಸುವ, ವ್ಯವಸ್ಥೆಯ ವಿರುದ್ಧ ಬಂಡಾಯದ ಧ್ವನಿಯೆತ್ತುವ ಸಾಮರ್ಥ್ಯ ಈ ಕೆಳವರ್ಗಗಳಿಗೆ ಬರುತ್ತದೆ ಎಂಬ ಆಶಯ ಲೇಖಕರದಾಗಿದೆ.

ಕೊರವ ಸಮುದಾಯ ಊರ ಅಂಚಿನಲ್ಲಿ ಎಲೆಮರೆಯ ಕಾಯಿಯಂತೆ ಬದುಕುವ ಬುಡಕಟ್ಟು ಸಮುದಾಯ ಕೇರಿಯಲ್ಲಿ ಬದುಕುವ ದಲಿತರು ಆಧುನಿಕ ಪ್ರಪಂಚದ ಬದುಕಿನ ಚಹರೆ ಅರಿಯಬೇಕಾದರೆ ಮೂಲತಃ ಅಕ್ಷರಜ್ಞಾನ ಬೇಕೆಂಬುದನ್ನು ದೃಢಪಡಿಸುತ್ತದೆ. ತನ್ನ ಸಮುದಾಯದ ಒಳಗಡೆ ಇರುವಂತಹ ಮೂಢ ಸಂಪ್ರದಾಯ, ಅನಿಷ್ಟ ಪದ್ಧತಿಗಳು, ಕಂದಾಚಾರ, ತೊಡಕುಗಳಿಂದ ಸಿಲುಕಿಕೊಂಡಿದೆ. ಅದನ್ನು ಬಿಡಿಸಿಕೊಳ್ಳಲಾಗದ ಸ್ಥಿತಿಯಲ್ಲಿ ಈ ಸಮುದಾಯ ನಿಂತಿರುವುದಕ್ಕೆ ಅನಕ್ಷರತೆಯೇ ಕಾರಣವಾಗಿದೆ. ಆ ಕಟ್ಟಳೆ ಬಿಡಿಸಿಕೊಳ್ಳಬೇಕಾದರೆ ಸಾಕ್ಷರತೆ ಅವಶ್ಯಕವಾಗಿದೆ. ಕೊರವರಿಗೆ ತಮ್ಮ ಪರಂಪರೆಯ ಪುರಾಣ ಚರಿತ್ರೆ ಪುಣ್ಯಕಥೆಗಳಿವೆ. ಆದರೆ ಅವುಗಳ ಚಹರೆಯ ಪರಿಚಯ ಮತ್ತು ಪರಿಜ್ಞಾನವಿಲ್ಲ. ಬಂಡವಾಳಶಾಹಿಗಳ ಕುತಂತ್ರದಿಂದ ಇವರ ತಾಂಡದ ಮೇಲೆ ದಾಳಿ ಮಾಡಿ ತಮ್ಮ ಎಲ್ಲ ವಸ್ತುಗಳನ್ನು ಕಸಿದುಕೊಂಡು ನಿರ್ಗತಿಕರನ್ನಾಗಿ ಮಾಡಿದಾಗ ಪೋಲಿಸ್ ಕೇಸ್ ಕೊಡಲು ಹೋದರೆ ಇವರನ್ನು ಬೈದು ಅರ್ಜಿಯನ್ನು ತಿರಸ್ಕರಿಸುತ್ತಾರೆ. ಇವರ ನೋವಿಗೆ ಈ ವ್ಯವಸ್ಥೆ ಸ್ಪಂದಿಸದಿರುವುದಕ್ಕೆ ಮೂಲಕಾರಣ ಅನಕ್ಷರತೆ, ಬಡತನ, ಆರ್ಥಿಕತೆಯಾಗಿದೆ. ಈ ಸಮುದಾಯ ಎಚ್ಚೆತ್ತಿಲ್ಲದಿರುವುದಕ್ಕೆ ಇವರ ಆರ್ಥಿಕ, ಸಾಮಾಜಿಕ, ರಾಜಕೀಯ, ಧಾರ್ಮಿಕ ವ್ಯವಸ್ಥೆಗಳು ಬದಲಾಗಬೇಕಾದರೆ ಶಿಕ್ಷಣದ ಅವಶ್ಯಕತೆಯಿಂದ ಮಾತ್ರ ಸಾಧ್ಯ ಎಂಬುದನ್ನು ಲೇಖಕರು ಕುರುಮಯ್ಯನ ಚಿಂತನಾ ನೆಲೆಗಳ ಮೂಲಕ ಅದರ ಮಹತ್ವವನ್ನು ಗುರುತಿಸಿದ್ದಾರೆ.

**ಜಮೀನ್ದಾರಿ ವ್ಯವಸ್ಥೆ**

ಉನ್ನತವರ್ಗಗಳ ಪ್ರತಿನಿಧಿಗಳಾಗಿರುವ ಕುಶಲಪ್ಪ ಮತ್ತು ಸಂಶಾಲಪ್ಪನಂತಹ ಜಮೀನ್ದಾರಿಗಳು ತಮ್ಮ ಅಸ್ತಿತ್ವದ ಭದ್ರತೆಗಾಗಿ ನಡೆಸುವಂತಹ ಕುತಂತ್ರಗಳನ್ನು ಇಲ್ಲಿ ಪ್ರಚುರಪಡಿಸಲಾಗಿದೆ. ಇವರು ಸಾಮಾನ್ಯ ಸಮಾಧಿಯ ಮೇಲೆ ತಮ್ಮ ಸಿದ್ಧಾಂತವನ್ನು ರೂಪಿಸಿಕೊಂಡು ಬಂದಿರುವುದು ಚರಿತ್ರೆಯ ಉದ್ದಕ್ಕೂ ಮೂಡಿಬಂದಿದೆ. ಮನೆತನದ ಒಳ ಹಗೆತನಕ್ಕಾಗಿ ಅಮಾಯಕ ಕೊರವರನ್ನು ಅಸ್ತ್ರವನ್ನಾಗಿ ಬಳಸಿಕೊಂಡಿದ್ದಾರೆ. ಇದು ಕೇವಲ ಒಂದು ಜಾತಿಯವರಿಗೆ ಸೀಮಿತವಾಗಿಲ್ಲ. ಈ

ವ್ಯವಸ್ಥೆಯು ತಳಸಮುದಾಯದ ದಲಿತ ಜನಾಂಗಗಳನ್ನು ಸಹ ಈ ಮೇಲುವರ್ಗವು ಜನಾಂಗೀಯ ಶೋಷಣೆ ಮಾಡುತ್ತವೆ. ಈ ಸಮುದಾಯದ ಕಷ್ಟ, ಬಡತನ, ಅಸಹಾಯಕತೆ ಇವುಗಳನ್ನೇ ಅವರು ಅಸ್ತ್ರವಾಗಿ ಬಳಸಿಕೊಂಡು ಅವರಿಗೆ ಸಾಲ ನೀಡಿ ತಮ್ಮಡಿಯಾಳಾಗಿ ನಡೆಸಿಕೊಂಡು ಬಂದಿದ್ದಾರೆ. ಹಾಗೆ ಕೊರವರು ಹಬ್ಬ-ಹರಿದಿನಗಳಿಗೆ ಸಾಲ ನೀಡಿ ಪ್ರತಿಯಾಗಿ ಹಂದಿಗೊಬ್ಬರ, ಕಸಬಾರಿಗೆ, ಬುಟ್ಟಿಗಳನ್ನು ಕಡಿಮೆ ಬೆಲೆಗೆ ತೆಗೆದುಕೊಳ್ಳುತ್ತಾನೆ, ಹೆಚ್ಚು ಬೆಲೆಗೆ ಆಂಧ್ರದ ರೈತರಿಗೆ ಮಾರಿಕೊಳ್ಳುತ್ತಾನೆ ಇದನ್ನು ಕುಶಲಪ್ಪನು ಒಂದು ವ್ಯಾಪಾರದಂತೆ ಮಾಡಿಕೊಂಡಿದ್ದಾನೆ. ಈ ಕ್ರಿಯೆಗೆ ಸಮುದಾಯದ ಹಿರಿಯ ವ್ಯಕ್ತಿಯಾದ ಕುರಮಯ್ಯನ ಪ್ರತಿರೋಧವಿದೆ. ಆದರೆ ತಮ್ಮ ಜನತೆಗೆ ಸೂಕ್ತ ಸೌಕರ್ಯ ಒದಗಿಸಬೇಕೆಂದು ಇವನು ಈ ನೋವನ್ನು ಸಹಿಸಿಕೊಳ್ಳುತ್ತಾನೆ. ಆದರೆ ತನ್ನ ತಾಳ್ಮೆಯ ಹಿಂದೆ ಬಡತನವೆಂಬುದು ಆತನ ಆವೇಶವನ್ನು ತಡೆಯುತ್ತದೆ. ಗೊಬ್ಬರದ ವಿಷಯವಾಗಿ ಮನೆಗೆ ಕರೆಸಿದಾಗ ಕುಶಲಪ್ಪ ತನ್ನ ಅಹಂಕಾರ ಮತ್ತು ದರ್ಪದಿಂದ ಸೇದಿದ ಸಿಗರೇಟನ್ನು ಕುರುಮಯ್ಯನ ಕಡೆಗೆ ಎಸೆಯುತ್ತಾನೆ. ಬೆಂಕಿಯಿಂದ ಕೈಸುಟ್ಟರೂ ಅವನು ಆದ ನೋವನ್ನು ತೋರಿಸಿಕೊಳ್ಳುವುದಿಲ್ಲ. ಇಂತಹ ಪ್ರಸಂಗವನ್ನು ಕಾದಂಬರಿಕಾರ ಇಲ್ಲಿ ನಿರೂಪಿಸಿರುವುದು ಕಾಣುತ್ತದೆ.

### ಮೇಲುವರ್ಗದವರ ಪ್ರತಿಷ್ಠೆಗೆ ಸಾಮಾನ್ಯರ ಬದುಕು ಅತಂತ್ರ

ಸಾಮಾಜಿಕ ವ್ಯವಸ್ಥೆಯಲ್ಲಿ ಉನ್ನತ ಸ್ಥಾನದಲ್ಲಿ ಇರುವಂತ ಸನಾತನವಾದಿಗಳು, ಜಮೀನ್ದಾರರು, ಬಂಡವಾಳಶಾಹಿಗಳು ಸ್ವಪ್ರತಿಷ್ಠೆಗಾಗಿ ಎಂತಹ ಕಾರ್ಯ, ಕೃತ್ಯಗಳು ಬೇಕಾದರೂ ಮಾಡುತ್ತಾರೆ. ಇಂತಹ ಪರಿಸ್ಥಿತಿ ಸಂದರ್ಭಗಳು ಹೊಸದೇನಲ್ಲ. ಇವು ಚರಿತ್ರೆ ಪುಟಗಳ ಉದ್ದಕ್ಕೂ ಕಂಡುಬರುವದು ಹೊಸ ಸಂಗತಿಯೇನಲ್ಲ. ಹಾಗೆಯೇ ಕುಶಲಪ್ಪ ಮತ್ತು ಸಂಶಾಲಪ್ಪ ಇವರುಗಳು ಒಳಗೊಳಗೆ ದಾಯಾದಿತನ ಹಗೆತನ ಕ್ರೌರ್ಯ ಸಾಧಿಸುತ್ತಾರೆ. ಪ್ರತಿಯೊಂದು ಪ್ರತಿಷ್ಠೆ ಸಂಕೇತವಾಗಿ ತೆಗೆದುಕೊಂಡು ತಮ್ಮ-ತಮ್ಮಲ್ಲೇ ಪೈಪೋಟಿ ನಡೆಸುತ್ತಾರೆ. ಇಬ್ಬರೂ ಒಬ್ಬರನೊಬ್ಬರು ತುಳಿಯುವ ಹುನ್ನಾರಗಳನ್ನು ಮಾಡುತ್ತಲೇ ಇರುತ್ತಾರೆ. ಅಂತಹ ಸಂದರ್ಭದಲ್ಲಿ ದಲಿತ ಜನಸಾಮಾನ್ಯರ ಬದುಕು ಅತಂತ್ರವಾಗಿ ತೊಳಲಾಟದ ನೋವುಗಳಿಗೆ ಬಲಿಯಾಗುತ್ತಾರೆ. ಮಲಿಯಾಬಾದ್ ಗುಡ್ಡಗಳಲ್ಲಿ ಕೋಳಿ ಪಂದ್ಯಗಳು ನಡೆಯುತ್ತವೆ. ಆದರೆ ಕೊರವ ಜಂಬಣ್ಣ ಈ ಹಿಂದೆ ಏಳು ಎಂಟು ಕೋಳಿಯ ಪಂದ್ಯ ಗೆಲ್ಲುತ್ತಾನೆ. ಅಂಕುಶದೊಡ್ಡಿ ಕೊರವರು ದಾಯಾದಿ ಕುಶಲಪ್ಪನ ಪರಿವಾರದಿಂದ ಅವನ ಪ್ರತಿಷ್ಠೆ ಹೆಚ್ಚುತ್ತದೆ. ಇದನ್ನು ಸಹಿಸಿದ ಸಂಶಾಲಪ್ಪ ಕರ್ನೂಲಿನಿಂದ ಕೋಳಿಯನ್ನು ತರಿಸಿ ಪಂದ್ಯಕ್ಕೆ ಇಳಿಯುತ್ತಾನೆ. ಇದನ್ನು ಗ್ರಹಿಸಿದ ಕುಶಲಪ್ಪ ಜಂಬಯ್ಯನಿಗೆ ಹಣದ ಆಮಿಷ ಒಡ್ಡಿ ಗೆಲ್ಲುವಂತೆ ಹೇಳುವನು. ಆದರೆ ಎರಡು ಕೋಳಿಗಳ ಯುದ್ಧ ಪ್ರಾರಂಭವಾಯಿತು. ಕುತಂತ್ರದಿಂದ ಕೋಳಿಕಾಲಿಗೆ ಕಟ್ಟಿದ, ಹರಿತವಾದ ಚಿಕ್ಕ ಕತ್ತಿ ಕಟ್ಟಿದ್ದರೂ ಯುದ್ಧದಲ್ಲಿ ಕೋಳಿ ಹೊಡೆದಾಟ ನಡೆಸಿ ಕೊನೆಗೆ

ಸಾವನ್ನು ಅಪ್ಪುತ್ತವೆ. ಇದರಿಂದ ಪಂದ್ಯ ಸಮಾನವಾಗುತ್ತದೆ. ಆದರೆ ಇಲ್ಲಿ ಜನಸಾಮಾನ್ಯರು ಆಟ ನೋಡಿ ಖುಷಿಪಟ್ಟರು. ಆದರೆ ಈ ದುರಂತದಿಂದ ಎರಡು ಕಡೆಯ ಆಳುಗಳು ತಮ್ಮ ಮಾಲೀಕರ ಪ್ರತಿಷ್ಠೆಗಾಗಿ ಮತ್ತು ಸಂತೋಷಕ್ಕಾಗಿ, ತಮ್ಮ ಜೀವನ ಹಂಗುಬಿಟ್ಟು ರೋಷ ಮತ್ತು ದ್ವೇಷದಿಂದ ಹೋರಾಡುತ್ತಾರೆ. ಅಲ್ಲದೆ ಎರಡು ಕೋಳಿ ಸತ್ತಿದ್ದರಿಂದ ಪಂದ್ಯ ಸಮವಾಗಿ ಜಂಬಯ್ಯ ಸಾಲಗಾರನಾಗಿ ಉಳಿದ ಮತ್ತು ಕೋಳಿಯನ್ನು ಕಳೆದುಕೊಂಡನು. ಇದರಿಂದ ಇಲ್ಲಿ ಮೇಲುವರ್ಗದವರು ಯಾವುದೇ ನಷ್ಟ ಅನುಭವಿಸುವುದಿಲ್ಲ. ಆದರೆ ಎಲ್ಲ ನೋವು, ಸಂಕಟ, ಹತಾಶೆ, ನಷ್ಟ ಎದುರಿಸುವುದು ದಲಿತರಾದಂತಹ ಕೊರವರಾಗಿದ್ದಾರೆ.

## ವೃತ್ತಿಪಲ್ಲಟ

ಭಾರತೀಯ ಸನಾತನವಾದಿ ವ್ಯವಸ್ಥೆಯು ರೂಪಿಸಿಕೊಂಡಿರುವ ಜಾತಿವ್ಯವಸ್ಥೆ ಮತ್ತು ಶ್ರೇಣೀಕೃತ ವ್ಯವಸ್ಥೆಯು ಕೆಳಸಮುದಾಯವನ್ನು ಕೆಳಸ್ತರದ ಹಂತದಲ್ಲಿರಿಸಿ. ಅಲ್ಲದೆ ಪುರೋಹಿತಶಾಹಿಯ ಉತ್ತರಾಧಿಕಾರಿಗಳು ಬಂಡವಾಳಶಾಹಿಗಳು, ಉನ್ನತ ಜಾತಿಯವರು ಕೂಡ ಆಧುನಿಕ ಸಂದರ್ಭದಲ್ಲಿ ಈ ನಿಯಮವನ್ನು ಪಾಲಿಸಿಕೊಂಡು ಬರುತ್ತಿದ್ದಾರೆ. ಇಲ್ಲಿ ಕುರುಮಯ್ಯ ಸಮುದಾಯದ ಜನತೆಯು ಪ್ರಗತಿಯ ದೃಷ್ಟಿಯಿಂದ ನಿಕೃಷ್ಟವಾದ ಹಂದಿ ಸಾಕಾಣಿಕೆ ವೃತ್ತಿಯಿಂದ ಮುಂದೆ ಹೋಗಿ ಕೃಷಿಕಾರ್ಯದಲ್ಲಿ ತಮ್ಮ ಸಮುದಾಯದ ಜನತೆಯನ್ನು ತೊಡಗುವಂತೆ ಮಾಡುತ್ತಾನೆ. ಅಲ್ಲದೆ ಅಲೆಮಾರಿ ಲಂಬಾಣಿ ಸಮುದಾಯದ ರೂಪನಾಯ್ಕನ ಸಲಹೆಯಂತೆ ಜೋಳದ ರಾಶಿಯನ್ನು ಮಾಡುವ ಕೃಷಿಕಾರ್ಯದಲ್ಲಿ ನಿರತರಾಗುತ್ತಾರೆ. ತಮ್ಮ ಹಸಿವು ನೀಗಿಸಿಕೊಳ್ಳುವ ಸಲವಾಗಿ ದವಸ-ಧಾನ್ಯ ಸಂಗ್ರಹಿಸಿಕೊಳ್ಳುತ್ತಾರೆ. ಇಲ್ಲಿ ಲೇಖಕರು ಕುರುಮಯ್ಯನ ಪ್ರಗತಿಪರತೆಯ ನಿಲುವುಗಳ ದೃಷ್ಟಿಕೋನದಿಂದ ವೃತ್ತಿಯ ಪಲ್ಲಟದಂತಹ ಕ್ರಿಯೆಯನ್ನು ಮಾಡಿದ್ದಾರೆ. ಆದರೆ ಮೇಲುವರ್ಗದ ಕುಶಲಪ್ಪನಂತವರಿಗೆ ಇದು ಸಹಿಸಲಾಗದ ತುತ್ತಾಗುತ್ತದೆ. ದಲಿತರು, ತಳಸಮುದಾಯಗಳು ಜಾಗೃತವಾದರೆ ತಮಗೆ ನೆಲೆಯಿಲ್ಲವೆಂಬುದುನ್ನರಿತು, ಕೊರವರ ಮೇಲೆ ತನ್ನ ಕ್ರೌರ್ಯವನ್ನು ಮೆರೆಯುತ್ತಾನೆ. ಶ್ರೀಮಂತಿಕೆಯ ದರ್ಪದಿಂದ ತಳಸಮುದಾಯದ ಜನತೆಯ ಮೇಲೆ ದೌರ್ಜನ್ಯ ನಡೆಸಿದೆ. ಇವರು ಕೊರವರು ಶ್ರಮಪಟ್ಟು ಸಂಗ್ರಹಿಸಿದ ಎಲ್ಲಾ ದವಸ-ಧಾನ್ಯಗಳನ್ನು ಹಾಗೂ ಕೊರವರ ಗುಡಿಸಲಲ್ಲಿದ್ದ ವಸ್ತುಗಳನ್ನು ಗೂಂಡಾಗಳ ಸಹಾಯದಿಂದ ಕೊಳ್ಳೆ ಹೊಡೆಸುತ್ತಾನೆ. ಇಲ್ಲಿ ತಮ್ಮ ಆತ್ಮಗೌರವಕ್ಕೆ ಚ್ಯುತಿ ಬಂದಾಗ ಕುರುಮಯ್ಯ ತನ್ನಲ್ಲಿರುವ ತಾಳ್ಮೆಯನ್ನು ಮುರಿದು ಕುಶಲಪ್ಪನ ವಿರುದ್ಧ ಸಿಡಿದೇಳುತ್ತಾನೆ ಎನ್ನುವಂತಹ ಪ್ರಸಂಗವನ್ನು ಲೇಖಕರು ಗುರುತಿಸುತ್ತಾರೆ.

**ಅನುಕಂಪದ ಹೆಸರಿನಲ್ಲಿ ಕೊರವರ ಶೋಷಣೆ**

ತಳಸಮುದಾಯದ ಬಂಧನಕ್ಕೆ ಕಾರಣವೆಂದರೆ ಬಡತನ ಮತ್ತು ಅಸಮಾನತೆ. ಉನ್ನತವರ್ಗಗಳ ಅನುಕಂಪದ ಹೆಸೆರಿನಲ್ಲಿ ನೀಡಿರುವಂತಹ ಉಂಬಳಿ ಅವರನ್ನು ಇನ್ನೂ ದಾಸ್ಯಕ್ಕೆದೂಡುತ್ತದೆ. ದುಕುತ್ತದೆ. ಕುಶಲಪ್ಪನ ತಂದೆಯಾದ ಬೋಳಬಂಡೆಪ್ಪನನ್ನು ರಜಾಕಾರ ದಾಳಿ ಸಮಯದಲ್ಲಿ ಕೊರವರು ರಕ್ಷಿಸಿದರು. ಅವರು ತಮ್ಮ ಪ್ರಾಣ ಒತ್ತೆ ಇಟ್ಟು ತನ್ನ ಪ್ರಾಣ ರಕ್ಷಿಸಿದ್ದಕ್ಕಾಗಿ ಅವರಿಗೆ ಝುರಿಬಾವಿಯನ್ನು ಉಂಬಳಿಯಾಗಿ ನೀಡುತ್ತಾನೆ. ತನ್ನ ತಂದೆ ನೀಡಿದ ಬಾವಿಯಿಂದಾಗಿ ಅವರು ತನ್ನ ಅಡಿಯಾಳಾಗಿ ಪಳಗಿಸಿಕೊಂಡು ಬಂದಿರುತ್ತಾನೆ. ಇಲ್ಲಿ ಕೊರವರು ಮಾಡಿದ ಸೇವೆ ನಗಣ್ಯವಾಗಿದೆ. ಅವರು ನೀಡಿದ ಝುರಿಬಾವಿ ಮಾತ್ರ ಇವರನ್ನು ಹಂಗಿನಲ್ಲಿ ಬಂಧಿಸುತ್ತಿದೆ. ಹೀಗೆ ಕೊರವರು ದಾಸ್ಯದ ಹಂತಕ್ಕೆ ಮುಟ್ಟಲು ಕಾರಣವಾಗಿದೆ. ಉನ್ನತವರ್ಗಗಳ ಅನುಕಂಪದ ಈ ಶೋಷಣೆ ಈ ಕಾದಂಬರಿಯ ಒಡಲಲ್ಲಿ ಚಿತ್ರಣಗೊಂಡಿದೆ.

**ಕೊರವರ ಸ್ವಾಭಿಮಾನದ ಪ್ರಶ್ನೆ**

ಕೊರವ ಸಮುದಾಯದ ಕುರುಮಯ್ಯ ಮತ್ತು ಅವನ ಸಹಚರರು ಮುಕ್ತವಾಗಿ ಸ್ವತಂತ್ರವಾಗಿ ಸ್ವನಿರ್ಣಯದ ಮೂಲಕ ಮೇಲುವರ್ಗದ ಒಪ್ಪಿಗೆ ಪಡೆಯದೆ ಕೃಷಿ ಕಾರ್ಯದಲ್ಲಿ ತೊಡಗುತ್ತದೆ. ಅದಕ್ಕಾಗಿ ಕುಶಾಲಪ್ಪ ರೇಗಾಡುತ್ತಾನೆ. ಆ ಸಂದರ್ಭದಲ್ಲಿ ಇವನನ್ನು ಸದೆಬಡಿಯಲು ಯಂಕನಗೌಡ ಸಹಾಯ ಮಾಡುತ್ತಾನೆ. ನಂತರ ಕೊರವರನ್ನು ದಾಳಗಳಾಗಿ ಬಳಸಿಕೊಂಡು ಕುಶಲಪ್ಪನನ್ನು ಬಗ್ಗು ಬಡಿಯಲು ಮುಂದಾಗುತ್ತಾರೆ. ಕೊರವರ ಮೂಲಕ ಬಂಡಾಯ ಹೂಡಿ ಪೊಲೀಸ್ ಕೇಸ್ ಹಾಕಿಸಿ ಕುಶಲಪ್ಪನನ್ನು ಹತ್ತಿಕ್ಕಿದನು. ಆದರೆ ಕೋರ್ಟಿನಲ್ಲಿ ಕುರುಮಯ್ಯನ ಪರವಾದ ನ್ಯಾಯನಿರ್ಣಯ ಬರುತ್ತದೆ. ಆದರೆ ಇದರಿಂದ ಕುರುಮಯ್ಯನೇ ದಣಿದಿದ್ದ ಎಂಬುದನ್ನು ಇಲ್ಲಿ ಗ್ರಹಿಸಲಾಗಿದೆ.

**ಪ್ರಕೃತಿವಿಕೋಪದಿಂದ ಕೊರವರ ಬದುಕು ಬಲಿ**

ಕುಶಲಪ್ಪನ ವಿರುದ್ಧ ಬಂಡಾಯ ಹೂಡಿ ಸಂಶಾಲಪ್ಪ ಮೂಲಕ ಕೊರ್ಟಿನಲ್ಲಿ ನ್ಯಾಯ ಕೊರವರು ಪಡೆದರು. ಆಗ ಸಂಶಾಲಪ್ಪ ತನ್ನ ಅಸ್ತಿತ್ವದ ಉಳಿವಿಗಾಗಿ ಮತ್ತೆ ಕೊರವರ ಮೇಲೆ ದಾಳಿ ಮಾಡುತ್ತಾನೆ. ಇದು ಪಾರಂಪರಿಕವಾಗಿ ದಲಿತರನ್ನು ಒಂದಲ್ಲೊಂದು ರೂಪದಲ್ಲಿ ಶೋಷಣೆಗೆ ಒಳಪಪಡಿಸುವುದನ್ನೆ ಕಾಣುತ್ತದೆ. ದಲಿತರ ಈ ಸ್ಥಿತಿಗೆ ಪ್ರಕೃತಿಯು ಕೂಡ ಹೊರತಾಗಿಲ್ಲ. ಅಸಹಾಯಕರಾದ ಸಂದರ್ಭದಲ್ಲಿ ಪ್ರಕೃತಿಯು ಸಹ ಇವರ ಬದುಕಿಗೆ ಮುಳುವಾಗಿ ಕಾಡುತ್ತದೆ ಎಂಬುದು ಪ್ರತೀಕವಾಗಿದೆ. ಇಲ್ಲಿ ಅತಿಯಾದ ಮಳೆಯ ಪರಿಣಾಮದಿಂದ ಅಂಕುಶದೊಡ್ಡಿಯು ಸಂಪೂರ್ಣ ಮಳೆಯ ವಿಕೋಪದಿಂದ ಜಲಾವೃತವಾಗುತ್ತದೆ. ಈ ತಳಸಮುದಾಯ ಜನತೆಯು ಸ್ವಾಭಿಮಾನದ ಬದುಕು ಕಟ್ಟಿಕೊಳ್ಳಲು ಪ್ರಯತ್ನಿದಾಗ ಮತ್ತೆ ಉನ್ನತವರ್ಗವನ್ನು ಆಶ್ರಯಿಸುವ ಸ್ಥಿತಿ

ಮಾರ್ಗವಾಗುತ್ತದೆ. ಭಾರತೀಯ ಜಾತಿವ್ಯವಸ್ಥೆಯು ದಲಿತರನ್ನು ದೇವಸ್ಥಾನದಿಂದ ಹೊರಗೆ ಉಳಿಸಿಕೊಂಡು ಬಂದಿದೆ. ತಮ್ಮ ಮನೆ-ಗುಡಿಸಲುಗಳೆಲ್ಲ ಮಳೆಯ ನೀರಿನಲ್ಲಿ ಕೊಚ್ಚಿ ಹೋದಾಗ ಬೆಟ್ಟದ ಮೇಲಿನ ದೇವಸ್ಥಾನದಲ್ಲಿ ಆಶ್ರಯ ಪಡೆದುಕೊಂಡರು. ಅದಕ್ಕೆ ಮತ್ತೊಮ್ಮೆ ಉನ್ನತ ವರ್ಗಗಳ ಕೆಂಗಣ್ಣಿಗೆ ಕೊರವರು ಬಲಿಯಾಗುತ್ತಾರೆ. ಇಂತಹ ದುರಂತದ ಸಂಗತಿಯನ್ನು ಲೇಖಕರು ಈ ಕಾದಂಬರಿಯಲ್ಲಿ ಅನಾವರಣಗೊಳಿಸಿದ್ದಾರೆ. ಕುಶಲಪ್ಪ ಕೊರವರ ವೃತ್ತಿಪಲ್ಲಟ ಮಾಡಿದ ಕಾರಣ ಕುರುಮಯ್ಯನನ್ನು ಒದೆಯಲು ತನ್ನ ಬಲಗಾಲು ಎತ್ತುತ್ತಾನೆ. ಸ್ವಾಭಿಮಾನದ ಬದುಕಿನತ್ತ ತುಡಿಯುತ್ತಿರುವ ಕುರುಮಯ್ಯ ತಾಳ್ಮೆಯಿಂದಲೇ ತನ್ನ ಬಂಡಾಯವನ್ನು ವ್ಯಕ್ತಪಡಿಸುವ ಕ್ರಮ ಕುಶಲಪ್ಪನಂತಹ ಉಗ್ರನ ಸ್ವಭಾವವನ್ನೇ ಬೆಚ್ಚಿಬಿಳಿಸುತ್ತದೆ. ಅದು ಈ ರೀತಿ ನಿರೂಪಿತವಾಗಿದೆ, "ವದ್ದು ಬುಡು ಧಣಿ; ದೊಡ್ಡ ಧಣಿ ಬೋಳಬಂಡೆಪ್ಪಗ ರಜಾಕಾರರ ಗಡಿಬಡ್ಯಾಗ ಪಿರಾಣ ಉಳಿಸಿದ ರಿಣ ತೀರುತಾದ ಈಸುದಿನ ನಮ್‌ಶ್ಯಾವ ಮಾಡಿದ್ದಕ್ಕೆ ಹೊಟ್ಟೆ ತುಂಬ ಒದೆತ ಸಿಕ್ಕವಂತ ಹೇಳಕಂತೀನಿ.....ವದ್ದು ಬುಡು ಧಣಿ; ವದ್ದು ಬುಡು"[೨೪] ಎಂದು ಬೋಳೆ ಸ್ವಭಾವದ ಕುರುಮಯ್ಯ ಹೇಳಿ ಎದ್ದು ನಿಂತು ಹುಲಿಯಂತೆ ಘರ್ಜಿಸಿದ. ಇದನ್ನು ಕಂಡು ಕುಶಲಪ್ಪ ತಣ್ಣಗಾಗುತ್ತಾನೆ. ಶತಶತಮಾನಗಳಿಂದ ದಲಿತರನ್ನು ಮೇಲುವರ್ಗ ಅಪಮಾನದ ನೆಲೆಯಲ್ಲಿ ಶೋಷಣೆ ಮಾಡುತ್ತಲೇ ಬಂದಿದೆ. ಅಜ್ಞಾನ ಅಂಧಕಾರದಲ್ಲಿರುವ ತಳಸಮುದಾಯಗಳು ಎಲ್ಲಾ ದೌರ್ಜನ್ಯಗಳನ್ನು ಸಹಿಸಿಕೊಂಡಿವೆ. ಆದರೆ ವೈಚಾರಿಕತೆಯಿಂದ ಸ್ವಾಭಿಮಾನ ಪಡೆದ ವರ್ಗಗಳಿಗೆ ಮಾತ್ರ ಹಸಿವಿಗಿಂತ ಸ್ವಾಭಿಮಾನ ಪ್ರಮುಖವಾಗುತ್ತದೆ ಎಂಬುದು ಇಲ್ಲಿ ವ್ಯಕ್ತವಾಗಿರುವುದು ತೋರುತ್ತದೆ.

**ದಾಯಾದಿಗಳ ಅಸ್ತ್ರವಾಗಿ ಕೊರವರ್ದು ಬಹ**

ವೃತಿಪಲ್ಲಟ ಮಾಡಿದ್ದೇ ಅಲ್ಲದೆ ಹಂದಿಗೊಬ್ಬರ ಕಡಿಮೆಯಾದ ಕಾರಣ ಕುಶಲಪ್ಪ ಇವರನ್ನು ಅವಮಾನದಿಂದ ಜರಿಯುತ್ತಾನೆ. ಸ್ವಾಭಿಮಾನಿಗಳಾದ ಈ ತಳಸಮುದಾಯ ಅವನ ದಾಯಾದಿಯಾದ ಸಂಶಾಲಪ್ಪನಿಗೆ ಮಾರುತ್ತಾರೆ. ಇದರಿಂದ ಆಕ್ರೋಶಗೊಂಡ ಕುಶಲಪ್ಪ ಕೊರವರ ಮೇಲೆ ದಾಳಿ ಮಾಡಿಸುತ್ತಾನೆ. ಇಂತಹ ಸಂದರ್ಭವನ್ನು ಬಳಸಿಕೊಂಡು ಅಸಹಾಯಕರಾದ ಕೊರವರಿಗೆ ನ್ಯಾಯ ದೊರಕಿಸಿಕೊಡುವುದಾಗಿ ಹೇಳಿ ಸಂಶಾಲಪ್ಪ ಕೂಡ ಸ್ವಾರ್ಥ ಸಾಧನೆಗಾಗಿ ಕೊರವರನ್ನು ಬಳಸಿಕೊಳುತ್ತಾನೆ. ಹೀಗೆ ದಾಯಾದಿಯಾದ ಕುಶಲಪ್ಪ ಮತ್ತು ಸಂಶಾಲಪ್ಪನ ಸಂಘರ್ಷದಲ್ಲಿ ಕೊರವರು ಅಸ್ತ್ರವಾಗಿ ಶೋಷಣೆಗೆ ಒಳಗಾಗಿದ್ದಾರೆ ಎಂಬುದು ನಿರೂಪಿತವಾಗಿದೆ.

**ಕೊರವರನ್ನು ಸದೆಬಡಿಯುವಲ್ಲಿ ಮೇಲುವರ್ಗದ ತಂತ್ರಗಳು**

ಸಾಮಾಜಿಕ ವ್ಯವಸ್ಥೆಯಲ್ಲಿ ಒಂದು ಸ್ವತಂತ್ರ ಬದುಕು ಕಟ್ಟಿಕೊಳ್ಳಬೇಕಾದರೆ ಒಬ್ಬರನ್ನೊಬ್ಬರು ಅವಲಂಬಿಸಲೇಬೇಕು, ಇಲ್ಲವಾದರೆ ಇನ್ನೊಬ್ಬರನ್ನು ತುಳಿದು ಮೇಲುಸ್ತರಕ್ಕೆ ಬರಬೇಕು. ಇಂತಹ

ಪ್ರಸಂಗಗಳು ಈ ವ್ಯವಸ್ಥೆಯಲ್ಲಿ ನಡೆಯುತ್ತಲೇ ಇರುತ್ತವೆ. ಒಬ್ಬರ ಸಮಾಧಿಯ ಮೇಲೆ ಇನ್ನೊಬ್ಬ ಅಸ್ತಿತ್ವವನ್ನು ರೂಪಿಸಿಕೊಳ್ಳುವುದು ಹೊಸ ಸಂಗತಿಯೇನೂ ಅಲ್ಲ. ಅದು ಚರಿತ್ರೆಯ ಪುಟಗಳಲ್ಲಿ ತುಂಬಿಕೊಂಡಿರುವುದು ಕಾಣುತ್ತದೆ. ಹಾಗೆಯೇ ಮೇಲುವರ್ಗಗಳು ಜನಸಾಮಾನ್ಯರ ಸ್ವಾತಂತ್ರ್ಯವನ್ನು ಕಿತ್ತುಕೊಂಡು ಅವರ ಬದುಕು ಅತಂತ್ರಗೊಳಿಸಿ ಅವರ ಜೀವಂತ ಸಮಾಧಿಯ ಮೇಲೆ ತಮ್ಮ ಅಸ್ತಿತ್ವವನ್ನು ರೂಪಿಸಿಕೊಳ್ಳುವ ಸಂದರ್ಭಗಳು ಕಾಣುತ್ತವೆ.

ಹಾಗೆಯೇ ಯಂಕನಗೌಡ ಹಾಗೂ ಸಂಶಾಲಪ್ಪನು ಕೊರವರನ್ನು ಸದೆಬಡಿಯಲು ಹಲವಾರು ತಂತ್ರಗಳನ್ನು ಪ್ರಯೋಗಿಸುತ್ತಾರೆ. ಕೊರವರು ವಾಸಿಸಿರುವ ಜಾಗದ ಮೇಲೆ ಯಂಕನಗೌಡನ ಕಣ್ಣು ಇರುತ್ತದೆ. ಅದನ್ನು ಪಡೆಯುವ ಸಲವಾಗಿ ಹಂದಿಗಳಿಂದ ರೋಗ ಹರಡುತ್ತದೆಯೆಂದು ಸುಳ್ಳು ಸುದ್ದಿ ಹಬ್ಬಿಸಿ ಹಂದಿಗಳನ್ನು ಕೊಲ್ಲಿಸಲು ತೊಡಗಿದ್ದಾನೆ. ಅದರ ಜೊತೆಗೆ ಕೊರವರನ್ನು ಅಲ್ಲಿಂದ ಓಡಿಸಲು ಪ್ರಯತ್ನಿಸಿ ಯಶಸ್ವಿಯಾದನು. ಈ ತಂತ್ರಕ್ಕೆ ರಾಜಕೀಯತೆಯ ಮತ್ತು ಸರಕಾರದ ಬೆಂಬಲ ಪಡೆದು ಸಂಶಾಲಪ್ಪ ಆ ಜಾಗದಲ್ಲಿ ಹೆಂಡದ ಡಿಪೋ ಸ್ಥಾಪಿಸಿದ. ಈಚಲ ಮರಗಳನ್ನು ತಮ್ಮ ಹೆಂಡದ ತಯಾರಿಕೆಗೆ ಬಳಸಿಕೊಂಡರು. ಈ ಈಚಲ ಪೊದೆಯನ್ನು ಆಶ್ರಯಿಸಿ ಜೀವಿಸುವ ಕೊರವರನ್ನು ತಡೆಯುತ್ತಾನೆ. ಅಲ್ಲದೆ ಸಂಶಾಲಪ್ಪನ ಮಾತು ಕೇಳಿ ಕುಶಲಪ್ಪ ವಿರುದ್ಧ ಕೋರ್ಟಿನಲ್ಲಿ ಸೋಲಿಸಿದ್ದ ಪ್ರತೀಕವಾಗಿ ಕೊರವರು ಕುಡಿಯುವ ನೀರಿಗಾಗಿ ಬಳಸುವ ಝುರಿಬಾವಿ ತನ್ನ ವಶಕ್ಕೆ ತೆಗೆದುಕೊಳ್ಳುತ್ತಾನೆ. ಸ್ವಾಭಿಮಾನಕ್ಕೆ ಜೋತುಬಿದ್ದು ಕುರುಮಯ್ಯ ಹಾಗೂ ಸಹಚರರು ಸೇರಿಕೊಂಡು ತೋಡಿದ ಬಾವಿ ಕೂಡ ಯಂಕನಗೌಡನ ಪಾಲಾಗುತ್ತದೆ. ಈ ಎಲ್ಲ ಶೋಷಣೆಗಳ ಮಧ್ಯೆ ಈ ಅಂಕುಶದೊಡ್ಡಿ ಕೊರವರ ಬಾಳು ನಿಜವಾಗಿಯೂ ಅಂಕುಶದ ತಿವಿತದಿಂದ ಬಳಲುವ ಆನೆಯಂತಾಗಿದೆ. ಈ ಎಲ್ಲಾ ಶೋಷಣೆಗಳ ನಡುವೆ ಕುರುಮಯ್ಯ ಅಂಜದೆ ಇಲ್ಲಿಯೇ ತನ್ನ ಬದುಕನ್ನು ಕಟ್ಟಿಕೊಳ್ಳುವ ಛಲ ಹೊಂದುವನು. ತಮ್ಮ ಈ ಸ್ಥಿತಿಗೆ ಕಾರಣವಾದ ಈ ವ್ಯವಸ್ಥೆಯ ಮೇಲಿನ ಸಿಟ್ಟನ್ನು ಬೆಟ್ಟದ ಮೇಲಿನ ದೇವರನ್ನು ಜರಿಯುವುದನ್ನು ಈ ರೀತಿಯಾಗಿ ನಿರೂಪಿಸುತ್ತಾನೆ. "ಅಲೆ! ಬೆಟ್ಟದ ಮ್ಯೇಲಿನ ಈಶ್ವರದ್ಯಾವ್ರೇ... ಮೇಲ್ಜಾತಿ ಮಂದೆಲ್ಲ ನಿನ್ನ ಹೆಣ್ತಿ ಮಕ್ಕಳೇನು! ನಾವೆಲ್ಲ ಮಿಂಡ್ರಗ್ಹುಟ್ಟಿದ ಮಕ್ಕಳೇನು? ಬೊಗಳಲೆ"[೨೫] ಎಂದು ಗುಡ್ಡದ ಮೇಲಿರುವ ದೇವರ ಗುಡಿಯ ಕಡೆಗೆ ಕಲ್ಲು ಎಸೆಯುವ ಮೂಲಕ ಅವನ ಅಸಹಾಯತನವನ್ನು ಇಲ್ಲಿ ಲೇಖಕರು ಗುರುತಿಸುತ್ತಾರೆ.

ಈ ಕಾದಂಬರಿಯಲ್ಲಿ ವ್ಯವಸ್ಥೆಯ ವಿರುದ್ಧ ನಡೆದಿದ್ದ ಈ ತಳಸಮುದಾಯದವು ಪರ್ಯಾಯ ಬದುಕು ರೂಪಿಸಿಕೊಳ್ಳುವಲ್ಲಿ ಮುಂದಾಗುತ್ತದೆ. ಆರಂಭಿಕ ಹಂತದಲ್ಲಿ ನ್ಯಾಯಾಲಯದಲ್ಲಿ ತೀರ್ಪು ದಲಿತರ ಪರವಾಗುತ್ತದೆ. ನಂತರ ಕುಶಲಪ್ಪ ಝುರಿಬಾವಿಯನ್ನು ಆಕ್ರಮಿಸಿಕೊಂಡಾಗ ಪರ್ಯಾಯವಾದ ಜೀವನಕ್ಕೆ ಬೇಕಾದ ಸ್ವಾಭಿಮಾನದ ಪ್ರತೀಕವಾಗಿ ಕಲ್ಲುಬಂಡೆಗಳನ್ನು ಹೊಡೆದು

ಬಾಪಿ ತೋಡಿ ಜಯಶೀಲರಾಗುತ್ತಾರೆ. ಆದರೆ ವ್ಯವಸ್ಥೆಯ ಕುತಂತ್ರವು ಇವರನ್ನು ನಿರಂತರವಾಗಿ ಶೋಷಣೆ ಮಾಡುವ ಮೂಲಕ ಬೀದಿಪಾಲು ಮಾಡುವ ನೈಜ ಚಿತ್ರಣವನ್ನು ಲೇಖಕರು ತಮ್ಮ ಬರಹದಲ್ಲಿ ಜೀವ ತುಂಬಿರುವುದು ಕಂಡುಬರುತ್ತದೆ. ಕಾದಂಬರಿಯ ಆರಂಭಿಕ ಹಂತದಲ್ಲಿಯೇ ಈ ವ್ಯವಸ್ಥೆ ಕೌರ್ಯವನ್ನು ಹಾಗೂ ಸಾಮಾನ್ಯರ ಸಂಕಷ್ಟವನ್ನು ಅನಾವರಣಗೊಳಿಸುತ್ತಾರೆ. ಇಲ್ಲಿ ಮುಂಡರ ವ್ಯಕ್ತಿಯೊಬ್ಬನು ಈ ವ್ಯವಸ್ಥೆಯ ಕ್ರಮವನ್ನು ಪ್ರತಿನಿಧಿಸುತ್ತಾನೆ. "ಮಾಡಿಕೊಂಡು ತಿಂದರೆ ಮನುಷ್ಯರ ಕಾಟ ಬೇಡಿಕೊಂಡು ತಿಂದರೆ ನಾಯಿ ಕಾಟ;"[೨೧] ಎಂಬ ಮಾತು ಅರ್ಥವಂತಿಕೆಯಿಂದ ಕೂಡಿದೆ. ಇಲ್ಲಿ ಸಾಮಾನ್ಯ ಜನರು ಸ್ವಾಭಿಮಾನದಿಂದ ಬದುಕುತ್ತೇವೆ ಎಂದರೂ ಈ ವ್ಯವಸ್ಥೆಯಲ್ಲಿನ ಸನಾತನವಾದಿ ಮನಸ್ಸುಗಳು ಒಪ್ಪಿಕೊಳ್ಳುವುದಿಲ್ಲ. ಇದು ಇಂದಿನ ಕ್ರಿಯೆ ಮಾತ್ರವಲ್ಲ. ಅನಾದಿಕಾಲದಿಂದಲೂ ನಡೆದುಬಂದಿರುವ ಕ್ರಿಯೆ. ಇಲ್ಲಿ ಲೇಖಕರು ತಮ್ಮ ವೈಚಾರಿಕ ನಿಲುವುಗಳ ಮೂಲಕ ಈ ವ್ಯವಸ್ಥೆಗೆ ಸವಾಲೊಡ್ಡುವ ಕ್ರಮಗಳನ್ನು ಈ ಕಾದಂಬರಿಯಲ್ಲಿ ಗುರುತಿಸಲಾಗಿದೆ.

ಭಾರತದ ಸಂದರ್ಭದಲ್ಲಿ ತಳಸಮುದಾಯದ ದಲಿತರ ಬದುಕು ಉನ್ನತವರ್ಗಗಳ ಸೇವೆಯಲ್ಲಿಯೇ ಮುಂದುವರಿದಿದೆ. ತಮಗೆ ಆಶ್ರಯದಾತರಾದ ಮೇಲುವರ್ಗದ ಪ್ರತಿನಿಧಿಗಳು ತಮಗೆ ದ್ರೋಹ ಬಗೆದರೂ ಅದನ್ನು ಪರಿಗಣಿಸದೆ, ಅವರ ಬದುಕಿಗೆ ಬೆಳಕಾಗಿ ತಮ್ಮ ಬದುಕನ್ನು ಕತ್ತಲೆಯಲ್ಲಿ ಸವೆಸುತ್ತಿದ್ದಾರೆ. ಚುನಾವಣೆಯಲ್ಲಿ ಸಂಶಾಲಪ್ಪ ಜಯಶೀಲನಾದಾಗ ಮೆರವಣಿಗೆ ಪ್ರಾರಂಭವಾಗುತ್ತದೆ. ಇಲ್ಲಿ ಬಿಜಲಿಯ ಬೆಳಕು ಸಂಶಾಲಪ್ಪನ ಮುಖದ ಮೇಲೆ ಬಿದ್ದಾಗ ಮಿರಿಮಿರಿ ಮಿಂಚುತ್ತಾನೆ. ಅವನ ಮುಖ ಮಿಂಚುವುದಕ್ಕೆ ಕಾರಣವಾದವರು ತಳವರ್ಗದ ದಲಿತ ಕೊರವರು. ಆದರೆ ಈ ಬೆಳಕಿಗೆ ಕಾರಣವಾದವರು ಯಾರು ಎಂಬುದನ್ನು ಮಾತ್ರ ಈ ಸಮಾಜ ಗುರುತಿಸಲಾರದ್ದಾಗಿದೆ. ಬಿಜಲಿ ಹೊತ್ತಂತಹ ಕಪ್ಪು ದೇಹದ ಕುರುಮಯ್ಯ ಅಸಹಾಯಕನಾಗಿ ನೆಲಕ್ಕೆ ಬಿದ್ದಾಗ ದವಲ್ಯಾನ ಹನ್ನೆರಡು ವರ್ಷದ ಮಗ ಬಂದು ತಾನು ಬಿಜಲಿ ಹೂರುವುದಾಗಿ ಮುಂದೆ ಬರುತ್ತಾನೆ. ಕುರುಮಯ್ಯ ಬೇಡವೆಂದಾಗ ನಿರೂಪಕ ಹೀಗೆ ಹೇಳಿದ್ದಾರೆ: "ಹೊರ್ಲಿ ಬಿಡು...., ಇಂದಲ್ಲ ನಾಳೆ ಅವನು ಸೈತ್ಯೆ ಬಿಜಲಿ ಹೊರ ಬೇಕಲ್ಲ? ಈಗ್ಲಿಂದ ಬಿಜಲಿ ಹೊತ್ಕೊಂಡ್ಹೋಗೋದು ಕಲಿತಾನ"[೨೨] ಎಂದು ನುಡಿದ ರಂಗಮ್ಮನ ಮಾತು ಪರಂಪರೆಯ ವೃತ್ತಿ ಮತ್ತು ಶೋಷಣೆಯ ಮುಂದುವರಿಕೆಯನ್ನು ಗುರುತಿಸುತ್ತದೆ.

ಆಧುನಿಕ ಸಂದರ್ಭದಲ್ಲಿಯೂ ದಲಿತರ ಬದುಕು ಉನ್ನತ ವರ್ಗದವರ ಅಡಿಯಾಳಾಗಿ ಮುಂದುವರಿಯುತ್ತಿರುವ ದುರಂತದ ಚಿತ್ರಣವನ್ನು ಇಲ್ಲಿ ಲೇಖಕರು ಸೆರೆ ಹಿಡಿದಿರುವುದು ಈ ಕಾದಂಬರಿಯ ಒಡಲಿನಿಂದ ಗ್ರಹಿಸಲಾಗಿದೆ.

೪.೩. ಹವನ

**ಮಲ್ಲಿಕಾರ್ಜುನ ಹಿರೇಮಠರ ಸಂಕ್ಷಿಪ್ತ ಪರಿಚಯ**

ಹೈದರಾಬಾದ್ ಕರ್ನಾಟಕದ ಪ್ರಮುಖ ಆಧುನಿಕ ಲೇಖಕರಲ್ಲಿ ಮಲ್ಲಿಕಾರ್ಜುನ ಹಿರೇಮಠರು ಒಬ್ಬರಾಗಿದ್ದಾರೆ. ಇವರು ಕಥೆ, ಕಾದಂಬರಿಕಾರರಾಗಿ, ಸಂಘಟನಕಾರರಾಗಿ, ಅನುವಾದಕರಾಗಿ, ಸಂಪಾದನಕಾರರಾಗಿ ಸಾಹಿತ್ಯಲೋಕದಲ್ಲಿ ಗುರುತಿಸಿಕೊಂಡವರು. ಜನಪರ ಕಾಳಜಿ ಮತ್ತು ಮಾನವತಾವಾದಿ ಮನೋಭಾವನೆಯೊಂದಿಗೆ ಸಮಾಜದ ವಾಸ್ತವ ಪರಿಸ್ಥಿತಿಯೊಂದಿಗೆ ಹೊಂದಿಕೊಂಡು ಅದನ್ನು ಎಳೆ ಎಳೆಯಾಗಿ ಅರಿತು, ಅದರ ಸಾಧಕ ಬಾಧಕ ಸಲಹೆ ಸೂಚನೆಗಳನ್ನು ಬರವಣಿಗೆಯ ಮೂಲಕ ಸಮಾಜಕ್ಕೆ ತಿಳಿಸಿಕೊಟ್ಟವರು. ತಮ್ಮ ಮಾತೃಭೂಮಿಯಲ್ಲೇ ಗಟ್ಟಿಯಾಗಿ ನಿಂತವರು. ಈ ಪ್ರದೇಶದ ವಾಸ್ತವದ ಸ್ಥಿತಿಗತಿಯನ್ನು ವಸ್ತುವಾಗಿ ಕೇಂದ್ರೀರಿಸಿ ಗುರುತಿಸಿದಂತಹ ಸಮಾಜಮುಖಿ ಚಿಂತಕರು ಇವರಾಗಿದ್ದಾರೆ.

ಇವರು ಹೈದರಾಬಾದ್ ಕರ್ನಾಟಕದ ಕೊಪ್ಪಳ ಜಿಲ್ಲೆಯ ಬಿಸರಹಳ್ಳಿ ಎಂಬ ಒಂದು ಚಿಕ್ಕ ಹಳ್ಳಿಯಲ್ಲಿ ಜೂನ್ ೫, ೧೯೪೬ರಲ್ಲಿ ಜನಿಸಿದರು. ಇವರು ಎಂ.ಎ. ಇಂಗ್ಲಿಷ್ ಪದವಿಯನ್ನು ೧೯೬೭ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಪಡೆದುಕೊಂಡರು. ೧೯೬೭ರಿಂದ ವಿ.ಎಂ.ಎಸ್.ಆರ್. ವಸ್ತ್ರದ ಕಲಾವಿಜ್ಞಾನ ಕಾಲೇಜಿನಲ್ಲಿ ಮತ್ತು ವಾಣಿಜ್ಯ ಮಹಾವಿದ್ಯಾಲಯ ಹುನಗುಂದದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ ಮಾರ್ಚ್ ೨೦೦೧ರಿಂದ ೨೦೦೪ವರೆಗೆ ಕಾರ್ಯ ನಿರ್ವಹಿಸಿದರು. ಪ್ರಸ್ತುತ ಧಾರವಾಡದಲ್ಲಿ ನೆಲೆಸಿದ್ದಾರೆ.

ಇವರು ಸಹ ಸಂಘಟನೆ ಮನೋಭಾವದವರು. ಅದಕ್ಕಾಗಿ ಕನ್ನಡ ಸಾಹಿತ್ಯ, ಸಂಸ್ಕೃತಿ, ಕಲೆಯ ಬೆಳವಣಿಗೆಗೆ ನಿರಂತರವಾಗಿ ಶ್ರಮಿಸಿದರು. ಕ್ರಿಯಾಶೀಲ ಲೇಖಕರಾದ ಇವರು ೧೯೯೦ರಲ್ಲಿ ಹುನಗುಂದ ತಾಲೂಕು ಕನ್ನಡ ಕ್ರಿಯಾಸಮಿತಿಯ ಸಂಚಾಲಕರಾಗಿ, ಜಿಲ್ಲಾ ಕನ್ನಡ ಪುಸ್ತಕ ಪರಿಷತ್ತಿನ ಸ್ಥಾಯಿ ಸಮಿತಿಯ ಸದಸ್ಯರಾಗಿ, ಚೇತನ ಕಲಾಕ್ಷೇತ್ರದ ಸಂಸ್ಥಾಪಕರಾಗಿದ್ದವರು. ಅನೇಕ ಕನ್ನಡ ಸಾಹಿತ್ಯ ಸಂಸ್ಕೃತಿಗೆ ಸಂಬಂಧಿಸಿದಂತಹ ಕಮಿಟಿ, ವಿಚಾರ ಸಂಕಿರಣಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಪ್ರಗತಿಪರ ವಿಚಾರವಾದಿಗಳನ್ನು ಸಂಘಟಿಸುವ ಮೂಲಕ ಸಂಘಟನೆಯನ್ನು ಹುಟ್ಟು ಹಾಕಿದವರು. ಇವರು ಇಂಗ್ಲಿಷ್ ಪ್ರಾಧ್ಯಾಪಕರಾದರೂ ಕನ್ನಡ ಸಾಹಿತ್ಯಲೋಕದಲ್ಲಿ ತಮ್ಮದೇ ಆದ ನೆಲೆಗಳ ಮೂಲಕ ವಿಶಿಷ್ಟವಾಗಿ ಗುರುತಿಸಿಕೊಂಡವರು. ಕಥೆ, ಕಾದಂಬರಿ, ಅನುವಾದ, ಸಂಪಾದನೆಗಳ ಮೂಲಕ ಸಾಹಿತ್ಯ ಕೃಷಿಗೈದವರು. 'ಅಕ್ವೇರಿಯಂ ಮೀನು' ಇವರು ಪ್ರಥಮ ಕವನ ಸಂಕಲನವಾಗಿದೆ. 'ಅಮೀನಾಪುರದ ಸಂತೆ' ಕಥಾಸಂಕಲನ. 'ಜ್ಞಾನೇಶ್ವರನ ನಾಡಿನಲ್ಲಿ' ಪ್ರವಾಸ ಕಥನ(೧೯೯೭), 'ಅಂತರ್ಗತ' ವಿಮರ್ಶೆ (೨೦೦೦). 'ಹವನ' ಕಾದಂಬರಿ

(೨೦೦೧), 'ಮೋಲೆವಾಲು ನಂಜಾಗಿ' ಕಥನಸಂಕಲನ(೨೦೧೦) ಹೀಗೆ ಅನೇಕ ಪ್ರಕಾರಗಳಲ್ಲಿ ಬರೆದವರು. ಇವರಲ್ಲಿ ತಮ್ಮದೆಯಾದ ಸೃಜನಾತ್ಮಕ ಚಿಂತನೆ, ಮಾನವೀಯ ಮನೋಭಾವ, ಪ್ರಗತಿಪರ ಚಿಂತನಾ ನೆಲೆಗಳಿಲ್ಲಿ ಗ್ರಾಮೀಣ ಬದುಕಿನ ವಾಸ್ತವದ ವಸ್ತು ಇಟ್ಟುಕೊಂಡು ಸಾಹಿತ್ಯಲೋಕವನ್ನು ಸೃಷ್ಟಿಸಿಕೊಂಡವರು. ಸಂಪಾದನ ಕಾರ್ಯವನ್ನು ಸಹ ಇವರು ನಿರ್ವಹಿಸಿದರು. ಇವರು ತಿರುಳ್ಗನ್ನಡ, ಬಾಗಿಲು, ಸತ್ಯಾಶ್ರಯ, ಹಿಡಿಯದ ಹಾದಿ, ಸಮೀಕ್ಷೆ ಹೀಗೆ ಹಲವು ಕೃತಿಗಳ ಸಂಪಾದನ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಅಲ್ಲದೆ ಅನುವಾದಕರಾಗಿ ಅಸ್ಸಾಂ ಗದ್ಯ ಮತ್ತು ಬಂಗಾಲಿ ಗದ್ಯ ಸಮೀಕ್ಷೆಯ ಲೇಖನಗಳು, ಆಂಟನ್ ಚೆಕಾಫ್‌ನ ಕಥೆಗಳನ್ನು ಅನುವಾದ ಮಾಡಿದವರು. ಇವರು 'ಅಕ್ಕವ್ವನ ಮಂದಿ' ಮತ್ತು 'ಅಮೀನಾಪುರದ ಸಂತೆ' ಕಥೆಗಳು ಆಕಾಶವಾಣಿ ಧಾರವಾಡ ಮತ್ತು ದೂರದರ್ಶನ ಚಂದನ ವಾಹಿನಿಯಲ್ಲಿ ನಾಟಕಗಳಾಗಿ ಪ್ರಸಾರಗೊಂಡಿವೆ.

ಇವರು ದಕ್ಷ ಆಡಳಿತಗಾರರು ಮಾತ್ರವಲ್ಲದೆ, ಸಾಹಿತ್ಯ ಕ್ಷೇತ್ರದಲ್ಲಿ ತಮ್ಮನ್ನು ವಿಶಿಷ್ಟವಾಗಿ ಗುರುತಿಸಿಕೊಂಡ ಸೃಜನಶೀಲ ಲೇಖಕರಾಗಿದ್ದಾರೆ. ಇವರ ಸಾಹಿತ್ಯಸೇವೆಗಾಗಿ ಇವರಿಗೆ ಅನೇಕ ಪ್ರಶಸ್ತಿ, ಪುರಸ್ಕಾರಗಳು ಸಂದಿವೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ-೨೦೦೯, ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾ ಮದ್ರಾಸ್, ಮದ್ರಾಸ್‌ನಲ್ಲಿ 'ಕನ್ನಡ ಸಾಹಿತ್ಯಕಾರ' ಪ್ರಶಸ್ತಿ (೨೦೦೯), ಸುವರ್ಣ ಕರ್ನಾಟಕ ರಾಜ್ಯ ಪ್ರಶಸ್ತಿ, ಜಿಲ್ಲಾ ಕಲಾವಿಕಾಸ ಪರಿಷತ್, ಕೊಪ್ಪಳ (೨೦೦೭), ಕನ್ನಡ ಪುಸ್ತಕ ಪರಿಷತ್ತು, ಬಾಗಲಕೋಟೆ ಜಿಲ್ಲಾ ಆರನೆಯ ಸಮ್ಮೇಳನದ ಅಧ್ಯಕ್ಷರು(೨೮ ಡಿಸೆಂಬರ್, ೨೦೦೩), ಹವನ ಕಾದಂಬರಿ. ಪ್ರಶಸ್ತಿಗಳು: ಮುದ್ದಣ್ಣ ದತ್ತಿನಿಧಿ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ಹಾವನೂರು ಪ್ರತಿಷ್ಠಾನ ಪ್ರಶಸ್ತಿ, ಹಾವೇರಿ (೨೦೦೨), ಸಮೀರವಾಡಿ ಪ್ರಶಸ್ತಿ(೨೦೦೨), ಕನ್ನಡ ರಾಜ್ಯೋತ್ಸವ ಸನ್ಮಾನ ಜಿಲ್ಲಾ ಆಡಳಿತ, ಬಾಗಲಕೋಟೆ(೨೦೦೪) ಪ್ರಶಸ್ತಿಗಳು, ಸನ್ಮಾನಗಳು ದೊರೆತಿವೆ. ಇಂತಹ ಸೃಜನಶೀಲ ಬರಹಗಾರರ ಕೃತಿಯಾದ 'ಹವನ' ಕಾದಂಬರಿಯನ್ನು ನನ್ನ ಅಧ್ಯಯನಕ್ಕೆ ಬಳಸಿಕೊಂಡು, ಅದರ ವಿಚಾರಧಾರೆಯನ್ನು ಅರಿಯುವ ಆಶಯದೊಂದಿಗೆ ಪ್ರಸ್ತುತ ಈ ಕೃತಿಯನ್ನು ಆಯ್ದುಕೊಳ್ಳಲಾಗಿದೆ.

**ಹವನ ಕಾದಂಬರಿಯ ವಿಶ್ಲೇಷಣೆ**

ಕನ್ನಡ ಸಾಹಿತ್ಯ ತನ್ನದೇ ಆದ ವಿಶಿಷ್ಟತೆಯನ್ನು ಬೆಳೆಸಿಕೊಂಡಿದೆ. ೮೦ರ ದಶಕದಲ್ಲಿ ಕನ್ನಡ ಸಾಹಿತ್ಯವನ್ನು ವ್ಯಾಪಕವಾಗಿ ಪ್ರಭಾವಿಸಿದ ದಲಿತ-ಬಂಡಾಯ ಚಳುವಳಿಯು ಸಮಾಜದಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗಿದ್ದ ಅನೇಕ ಸಮುದಾಯಗಳನ್ನು ಮತ್ತು ಲೇಖಕರನ್ನು ಮುಂಚೂಣಿಗೆ ತಂದಿತು. ವಿಶೇಷವಾಗಿ ಈ ಕಾಲಘಟ್ಟದಲ್ಲಿ ಕನ್ನಡ ಕಾದಂಬರಿಯ ಕ್ಷೇತ್ರ ವಿಸ್ತಾರವಾಗಿ ಜನಾಂಗೀಯ ಅಧ್ಯಯನ, ಸಂಶೋಧನೆ, ಇತಿಹಾಸ ಇವೆಲ್ಲವನ್ನು ಒಳಗೊಂಡು ಒಂದು ನೂತನ

ಸ್ವರೂಪವನ್ನು ಕಾದಂಬರಿ ಪ್ರಭೇದ ಪಡೆಯಿತು. ಈ ತರಹದ ಬರವಣಿಗೆಯಲ್ಲಿ ಅಲೆಮಾರಿ, ಅರೆಅಲೆಮಾರಿ ಜನಾಂಗವು ಆಧುನಿಕ ಸಂದರ್ಭದಲ್ಲಿ ತಮ್ಮ ಪಾರಂಪರಿಕ ಜೀವನಶೈಲಿಯನ್ನು ಬದಲಿಸಿಕೊಳ್ಳಬೇಕಾದ ಒತ್ತಡ ಮತ್ತು ಬಿಕ್ಕಟ್ಟುಗಳನ್ನು ಅನಿವಾರ್ಯವಾಗಿ ಎದುರಿಸಬೇಕಾಗಿದೆ. ನೂತನ ಜೀವನಶೈಲಿಯ ಭೀತಿ, ಸಂಕಷ್ಟ ಇವೆರಡರ ಸಂಘರ್ಷಗಳು ಈ ಕಾದಂಬರಿಯ ಕೇಂದ್ರವಾಗಿದೆ. ಬದಲಾದ ಸಾಮಾಜಿಕ ವ್ಯವಸ್ಥೆಯಲ್ಲಿಯೂ ಈ ಸಮುದಾಯಗಳು ತಮ್ಮ ಪಾರಂಪರಿಕ ಸಮಾಜಿಕ, ಧಾರ್ಮಿಕ, ಸಾಂಸ್ಕೃತಿಕಮೌಲ್ಯಗಳನ್ನು ಉಳಿಸಿಕೊಳ್ಳುವ ಬಗೆ ಹೇಗೆಂಬ ಸಂಘರ್ಷದ ನೆಲೆಗಳು ಇಲ್ಲಿ ಕಂಡುಬರುತ್ತವೆ. ಹಾಗೆಯೇ ಈ ಸಮುದಾಯಗಳು ಆರ್ಥಿಕ, ರಾಜಕೀಯ ಸಂಕಷ್ಟಗಳನ್ನು ಎದುರಿಸಬೇಕಾದ ಅನಿವಾರ್ಯತೆಯನ್ನು ಇಲ್ಲಿ ಅಭಿವ್ಯಕ್ತಿಸಿರುವಂತಹದ್ದು ಕಂಡುಬರುತ್ತದೆ. ಪ್ರಮುಖ ಸಮುದಾಯಕೇಂದ್ರಿತ ಆಶಯಗಳು ಈ ಕಾದಂಬರಿಯಲ್ಲಿ ಅನಾವರಣಗೊಂಡಿವೆ.

ಹವನ ಕಾದಂಬರಿ ಒಂದು ಸಾಂಸ್ಕೃತಿಕ ಆವರಣ ಹೊಂದಿರುವ ವಿಶಿಷ್ಟ ಕೃತಿಯಾಗಿದೆ. ಇದು ಮಾನವಶಾಸ್ತ್ರೀಯ ಅಧ್ಯಯನ ಮತ್ತು ಆಧುನಿಕವಾದ ವೈಚಾರಿಕ ಸಂರಚನೆ ಎರಡಕ್ಕೂ ಸೃಜನಶೀಲವಾಗಿ ಮುಖಾಮುಖಿಗೊಳ್ಳುತ್ತದೆ. ಈ ಕಾದಂಬರಿಯು ಲಮಾಣಿ ಸಂಸ್ಕೃತಿ ಮತ್ತು ಬದುಕಿನ ಮೇಲೆ ಆಧುನಿಕತೆಯ ಪ್ರಭಾವವನ್ನು ಸ್ಫೋಟಗೊಳಿಸುತ್ತದೆ. ಆಧುನಿಕತೆಯ ಪ್ರತೀಕವಾಗಿ 'ಹವನ' ತಾಂಡಕ್ಕೆ ಪ್ರವೇಶಿಸುವ ಮಾಸ್ತರನ ಮೂಲಕ ಬದಲಾವಣೆಯ ಪ್ರಜ್ಞೆಯೊಂದು ಈ ಜನಾಂಗದಲ್ಲಿ ಒಡಮೂಡುತ್ತದೆ. ಈ ಮಾಸ್ತರ ಕೇವಲ ಶಾಲೆಗೆ ಮಾತ್ರ ಸೀಮಿತನಾಗದೆ ಈ ಜನಾಂಗವನ್ನು ಜಾಗೃತಗೊಳಿಸುತ್ತಾನೆ. ಈ ಜನಾಂಗಕ್ಕೆ ಭೂಮಿ ಕೊಡಿಸಿ ಸ್ವಾವಲಂಬಿಯಾಗಿಸಲು ಬಂಜಾರ ಸಂಘದ ಅಧ್ಯಕ್ಷ 'ಹೀರಾಲಾಲ'ನ ಮೂಲಕ ಹೋರಾಟಕ್ಕೆ ಸಿದ್ಧಗೊಳಿಸುತ್ತಾನೆ. ಉಳ್ಳವರ ಕ್ರೌರ್ಯಕ್ಕೆ ಬಲಿಯಾಗಿ ಹಲವು ಸಂಕಷ್ಟಗಳನ್ನು ಅನುಭವಿಸಿ ಈ ಸಮುದಾಯವು ಕೃಷಿಗಾಗಿ ಭೂಮಿಯನ್ನು ಪಡೆದರೂ ಆಧುನಿಕತೆ, ಜಾಗತೀಕರಣ, ಗಣಿಗಾರಿಕೆಗಳ ಪ್ರವೇಶದಿಂದ ಇವರ ಹೋರಾಟವೆಲ್ಲ ಕೊಚ್ಚಿ ಹೋಗುತ್ತದೆ. ಸ್ವಾವಲಂಬಿ ಜೀವನದ ಮೂಲಕ ತನ್ನ ಸಮುದಾಯವನ್ನು ಪ್ರಗತಿಯತ್ತ ಕೊಂಡೊಯ್ಯುವ ಹಂಬಲ ನಾಯಕನಾದ ಸೊಮಾಲ್ಯನದಾಗಿತ್ತು. ಆದರೆ ಉಳ್ಳವರ ದೌರ್ಜನ್ಯ ಹಾಗೂ ಆಧುನಿಕತೆಯ ಭರಾಟೆಯಲ್ಲಿ ಇವರ ಜೀವನ ಅತಂತ್ರ ಸ್ಥಿತಿಯನ್ನು ತಲುಪುತ್ತದೆ. ಸೊಮಾಲ್ಯ ಬೇಸಾಯವನ್ನು ಕೈಗೊಂಡು ಪ್ರಗತಿಯನ್ನು ಸಾಧಿಸುವ ಆಶಯ ಹೊತ್ತಿದ್ದ. ಆದರೆ ಕೊನೆಗೆ ಭೂಮಿಯಲ್ಲಿ ಉಳುಮೆ ಮಾಡುವ ಅವಕಾಶ ಸಿಗದೆ, ತಮ್ಮ ಸಂಸ್ಕೃತಿ ಮತ್ತು ಪರಂಪರೆಯನ್ನು ಉಳಿಸಿಕೊಳ್ಳಲಾಗ ಸ್ಥಿತಿಯನ್ನು ತಲುಪುತ್ತಾರೆ. ಲಂಬಾಣಿ ಸಮುದಾಯದ ಯಾತನೆ, ಸಂಕಷ್ಟ, ಅತಂತ್ರ ಸ್ಥಿತಿ ಮತ್ತು ಅದರ ಸಾಧಕ-ಬಾಧಕಗಳನ್ನು ತಮ್ಮ ವೈಚಾರಿಕ ನಿಲುವುಗಳ ಮೂಲಕ ಕಾದಂಬರಿಕಾರರು ತೋರಿಸಿಕೊಟ್ಟಿದ್ದಾರೆ.

ಹೈದರಾಬಾದ್ ಕರ್ನಾಟಕ ಪ್ರದೇಶದವರಾದ ಈ ಲೇಖಕರು ಇಲ್ಲಿನ ಪರಿಸರದ ಸಾಮಾಜಿಕ ಜೀವನಕ್ರಮವನ್ನು ಈ ಸಮುದಾಯದ ಮೂಲಕ ಗುರುತಿಸಿದ್ದಾರೆ. ಹೈದರಾಬಾದ್ ಕರ್ನಾಟಕ ಪ್ರಾಂತ್ಯವು ಐತಿಹಾಸಿಕವಾಗಿ, ಸಾಹಿತ್ಯಕವಾಗಿ ತನ್ನದೇ ಆದ ಒಂದು ವಿಶಿಷ್ಟ ನೆಲೆಯ ತಾಣವಾಗಿ ಗುರುತಿಸಿಕೊಂಡಿದೆ. ಇಂತಹ ತಾಣದಲ್ಲಿ ನೆಲೆಸಿದ ಲೇಖಕ ಅಲ್ಲಿನ ತಳಸಮುದಾಯಗಳ ಜೀವನ ಕ್ರಮವನ್ನು ತಮ್ಮ ಸೃಜನಶೀಲ ಬರಹಗಳಲ್ಲಿ ಅನಾವರಣಗೊಳಿಸಿದ್ದಾರೆ. ತಲ-ತಲಾಂತರಗಳಿಂದ ಅಲೆಮಾರಿಗಳಾಗಿರುವ ಇವರು ಪಾಯಶಃ ಮೂಲ ರಾಜಸ್ಥಾನಕ್ಕೆ ಸೇರಿದ ಮತ್ತು ಭಾರತದಲ್ಲಿ ಎಲ್ಲೆಡೆ ಹರಡಿಕೊಂಡಿರುವ ಈ ಜನಾಂಗವು ಪ್ರತ್ಯೇಕವಾದ ತಾಂಡವನ್ನು ನಿರ್ಮಿಸಿಕೊಂಡು ವಾಸಿಸುತ್ತ ಬಂದಿದ್ದಾರೆ. 'ಹವನ' ಎಂಬುದು ಕಲ್ಲೂರು ಬಳಿ ಇರುವ ಒಂದು ಲಮಾಣಿ ತಾಂಡದ ಹೆಸರು. ಇಲ್ಲಿ ವಾಸವಾಗಿರುವ ಸಮುದಾಯದ ಸಾಂಸ್ಕೃತಿಕ ಜೀವನ ಮತ್ತು ಆಧುನಿಕತೆಯು ಮುಖಾಮುಖಿಯಾಗುವಾಗ ಎದುರಾಗುವ ಕೆಡುಕುಗಳನ್ನು ಸೂಕ್ಷ್ಮವಾಗಿ ಗ್ರಹಿಸಿರುವುದು ಪ್ರಸ್ತುತ ಕಾದಂಬರಿಯಲ್ಲಿ ಕಂಡುಬರುತ್ತದೆ.

ಲಮಾಣಿಗರು ಮೂಲತಃ ರಾಜಸ್ಥಾನದ ರಜಪೂತ ವಂಶಸ್ಥರು. ಮಾಗಲರ ಜೊತೆಗೆ ತಿರುಗುತ್ತ ತಿರುಗುತ್ತಾ ಬಂದ ಈ ಜನಾಂಗವು, ಮಹಾರಾಷ್ಟ್ರ ರಾಜ್ಯದ ಕಡೆಗೆ ಅಲೆಮಾರಿಗಳಾಗಿ ಬಂದರು. ಅಲ್ಲದೆ ಮೂಲತಃ 'ಲವಣ' ಮಾರುವ ವೃತ್ತಿಯನ್ನು ಇವರು ತಮ್ಮ ಉಪಜೀವನಕ್ಕಾಗಿ ಅನುಸರಿಸಿದರು. ಈ ಉಪ್ಪು ಮಾರುವ ದೆಸೆಯಿಂದ ಇವರನ್ನು ಲಮಾಣ್ಯರು ಎಂಬ ಉಕ್ತಿಗಳಿಂದ ಕರೆಯುತ್ತಾರೆ. ಅಲ್ಲದೆ ಯುದ್ಧಭೂಮಿಯಲ್ಲಿ ಹೋರಾಟ ಮಾಡುವ ಯೋಧರಿಗೆ ಯುದ್ಧ ಸಾಮಗ್ರಿಗಳನ್ನು ಮುಟ್ಟಿಸುವಂತಹ ಕೆಲಸವನ್ನು ಇವರು ಮಾಡುತ್ತಿದ್ದರು. ಈ ವೃತ್ತಿಗೆ ನಿಂತವರು. ತದನಂತರ ಅವರ ಜೀವನ ಅತಂತ್ರವಾಗಿ ವಲಸೆಯನ್ನು ಕೈಗೊಂಡರು. ಹೀಗೆ ವಲಸೆಯನ್ನು ಕೈಗೊಂಡ ಇವರು ಅಲೆಯುವ ಮೂಲಕ ಬಯಲು ಸೀಮೆಯಾದ ಗುಲ್ಬರ್ಗ, ಕೊಪ್ಪಳದಲ್ಲಿ ಸ್ವಲ್ಪದಿನ ನೆಲೆಸಿದರು. ಅಲ್ಲಿಂದ ನಾಗರಕ್ವಾಟೆಗೆ ಬಂದಾಗ ಮೇಲುವರ್ಗದವರ ಹೊಲದಲ್ಲಿ ದುಡಿಯುವ ಆಳುಗಳು ಬೇಕಾದ ಕಾರಣ ಮತ್ತು ಇವರಿಗೆ ಅನುಕೂಲ ಸ್ಥಳ ಬೇಕಾಗಿದ್ದರಿಂದ ಈ ಕಲ್ಲೂರಿನ ಹತ್ತಿರ ಗುಡ್ಡದ ಪಕ್ಕದಲ್ಲಿ ಈ ಸಮುದಾಯ ಸುಸ್ಥಿರವಾದ ಜಾಗವೆನಿಸಿ ಇಲ್ಲಿ ನೆಲೆಸಿದರು. ಇದು ಮುಂದೆ ಕಲ್ಲೂರು ತಾಂಡ, ಹವನ ತಾಂಡ, ಎಂಬ ಹೆಸರುಗಳಿಂದ ಗುರುತಿಸಿಕೊಂಡಿದೆ.

## ವೃತ್ತಿ

ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ದಲಿತರು ಹಾಗೂ ತಳಸಮುದಾಯಗಳು ಉನ್ನತ ವರ್ಗದ ಪುರೋಹಿತಶಾಹಿಗಳು, ಬಂಡವಾಳಶಾಹಿಗಳು ಹಾಗೂ ಜಮೀನ್ದಾರರಿಂದ ನಲುಗುತ್ತಿರುವುದನ್ನು ಕಾಣುತ್ತೇವೆ. ತಳಸಮುದಾಯದ ಜನರು ತಮ್ಮ ಮನೆಯ ಜೀತದಾಳು, ಹೊಲದ ಕೂಲಿ

ಆಳುಗಳಾಗಿ ಬದುಕಬೇಕೆನ್ನುವುದು ಇವರ ಬದ್ಧತೆಯಾಗಿದೆ. ಆದ್ದರಿಂದ ತಳಸಮುದಾಯದ ಪ್ರಗತಿಯು ಉಳ್ಳವರಿಗೆ ಸಹಿಸದ ತುತ್ತಾಗಿ ಪರಿಣಮಿಸಿದೆ. ಇದರಿಂದಾಗಿ ಸಾಮಾನ್ಯ ಜನತೆಯ ಮೇಲೆ ಶೋಷಣೆಯು ನಿರಂತರವಾಗಿ ನಡೆದುಕೊಂಡು ಬಂದಿದೆ. ಈ ಶೋಷಣೆಯು ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಇದಕ್ಕೆ ಕಾರಣ ಇಲ್ಲಿನ ಜನತೆಯಲ್ಲಿನ ಅಜ್ಞಾನ, ಬಡತನ ಹಾಗೂ ಆರ್ಥಿಕತೆಯ ಕೊರತೆಯಾಗಿದೆ. ಇಲ್ಲಿ ಕಂಡುಬರುವ ಹವನ ತಾಂಡದ ಜನತೆಯ ವೃತ್ತಿಯನ್ನು ಗಮನಿಸುವುದಾದರೆ, ಇವರು ಕೂಲಿಯನ್ನು ಆಶ್ರಯಿಸಿ ಬದುಕುವುದು ಕಂಡುಬರುತ್ತದೆ. ಇದರ ಜೊತೆಗೆ ಕಾಡಿನಲ್ಲಿ ಸಿಗುವ ಹಣ್ಣು-ಹಂಪಲು, ಕಟ್ಟಿಗೆಯನ್ನು ಹೊತ್ತುತಂದು ಮಾರಿ ತಮ್ಮ ಜೀವನವನ್ನು ನಿರ್ವಹಿಸಬೇಕಾಗುತ್ತದೆ. ಮತ್ತೆ ಕೆಲವರು ತಮ್ಮ ಬಡತನದ ಬದುಕನ್ನು ನಿರ್ವಹಿಸಲು ಕಳ್ಳತನ, ಕಳ್ಳಬಟ್ಟಿಯಂತಹ ವೃತ್ತಿಯನ್ನು ಅವಲಂಭಿಸಿರುವುದು ಕಂಡುಬರುತ್ತದೆ. ಹೀಗೆ ಪ್ರಸ್ತುತ ಕಾದಂಬರಿಯಲ್ಲಿ ಈ ಲಮಾಣಿ ಜನಾಂಗವು ತಮ್ಮ ಜೀವನದ ನಿರ್ವಹಣೆಗಾಗಿ ಇಂತಹ ವೃತ್ತಿಗಳನ್ನು ಅವಲಂಬಿಸಿರುವುದನ್ನು ಗಮನಿಸಬಹುದಾಗಿದೆ.

**ತೀಜ ಹಬ್ಬದ ಸಂಪ್ರದಾಯ**

ಪ್ರತಿಯೊಂದು ಸಮುದಾಯಕ್ಕೆ ತನ್ನದೇ ಆದ ಒಂದು ಸಂಸ್ಕೃತಿ ಇದ್ದೇ ಇರುತ್ತದೆ. ಅದರಂತೆ ಈ ಸಮುದಾಯಕ್ಕೂ ತನ್ನದೇ ಆದ ವಿಶಿಷ್ಟ ಸಂಸ್ಕೃತಿ, ಸಂಪ್ರದಾಯಗಳು, ಆಚಾರ-ವಿಚಾರಗಳು ಕಂಡುಬರುತ್ತವೆ.. ಅದರಲ್ಲಿ 'ತೀಜ ಹಬ್ಬ' ಒಂದು ಪ್ರಮುಖವಾದ ಸಾಂಸ್ಕೃತಿಕ ಹಬ್ಬವಾಗಿದೆ. ಇದಕ್ಕೆ ಸಸಿ ಹಬ್ಬ ಎಂದು ಕೂಡ ಕರೆಯುತ್ತಾರೆ. ಈ ಆಚರಣೆಯ ಮೂಲಕ ಈ ಜನಾಂಗ ಭಗವಂತನಾದ ಕೃಷ್ಣನ ಕಥೆಯೊಂದಿಗೆ ಜೊಡಿಸಿಕೊಳ್ಳುತ್ತದಲ್ಲದೆ, ಇದು ಸಾಮೂಹಿಕ ಮನೋಲ್ಲಾಸದ ಸಂದರ್ಭವಾಗುತ್ತದೆ. ಮುಖ್ಯವಾಗಿ ಹೆಣ್ಣಿನ ಶೀಲವನ್ನು ಗುರುತಿಸುವಂತಹದಾಗಿದೆ. ಈ ಹಬ್ಬದಲ್ಲಿ ತರುಣ-ತರುಣಿಯರು ತಾವು ಮೆಚ್ಚಿದ ವರನನ್ನು ಆರಿಸಿಕೊಳ್ಳುವುದು ಮತ್ತು ಅವರು ತಮ್ಮ ಮುಂದಿನ ವೈವಾಹಿಕ ಜೀವನಕ್ಕೆ ಸಿದ್ಧವಾಗುವ ಹಂತಕ್ಕೆ ಈ ಹಬ್ಬವು ಸಹಕಾರಿಯಾಗಿದೆ. ಇಂತಹ ಆಚರಣೆ ಮೂಲಕ ತಮ್ಮ ಸಂಸ್ಕೃತಿಯ ಶ್ರೀಮಂತಿಕೆಯನ್ನು ಪ್ರದರ್ಶಿಸುವ ಮೂಲಕ, ಸಾಂಸ್ಕೃತಿಕ ಅಸ್ಮಿತೆಯನ್ನು ಕಾಯುಕೊಳ್ಳುವುದನ್ನು ಇಲ್ಲಿ ಗುರುತಿಸಲಾಗಿದೆ.

**ಜಾತಿವ್ಯವಸ್ಥೆ**

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿವ್ಯವಸ್ಥೆಯು ಒಂದು ಪ್ರಮುಖ ಅಂಶವಾಗಿದೆ. ಇದು ಮೂಲಭೂತವಾದಿಗಳು ಮತ್ತು ಪುರೋಹಿತಶಾಹಿಗಳು ತಮ್ಮ ಅಸ್ತಿತ್ವದ ಭದ್ರತೆಗಾಗಿ ರೂಪಿಸಿಕೊಂಡಿರುವ ವ್ಯವಸ್ಥೆಯಾದರೂ ಈ ಜಾತೀಯತೆಯ ಅವಕಾಶವನ್ನು ಉನ್ನತವರ್ಗಗಳು ತಮ್ಮ ಅನುಕೂಲಕ್ಕೆ ತಕ್ಕಂತೆ ರೂಪಿಸಿಕೊಂಡು ಇಂದಿಗೂ ಮುನ್ನಡೆಯುತ್ತಿದ್ದಾರೆ. ಪ್ರಸ್ತುತ

ಕಾದಂಬರಿಯ ಆರಂಭದಲ್ಲಿಯೇ ಲೇಖಕರು ಅಸಮಾನತೆಯನ್ನು ಸೃಷ್ಟಿಸುತ್ತಿರುವ ಪುರೋಹಿತಶಾಹಿಯನ್ನು ಮಾರ್ಮಿಕವಾಗಿ ಪರಿಚಯಿಸುತ್ತಾರೆ. ಕಲ್ಲೂರಿಗೆ ಹೋಮ-ಹವನ ಮಾಡುವ ಪ್ರಸ್ತಾಪ ಬರುತ್ತದೆ. ಇದು ಅಸಮಾನತೆಯ ಪ್ರತಿಕವಾಗಿದೆ. 'ಹವನ' ಎಂಬ ಅರ್ಥವೇ ಬೆಂಕಿ ಎಂಬುದನ್ನು ಅನಾವರಣಗೊಳಿಸುತ್ತದೆ. ಇದು ತಳಸಮುದಾಯದ ಮತ್ತು ಅಸಹಾಯಕ ವರ್ಗವನ್ನು ನಿರಂತರವಾಗಿ ಶೋಷಣೆಗೆ ಒಳಪಡಿಸುತ್ತದೆ.

ಇಲ್ಲಿ ಒಂದು ಕಡೆ ಉನ್ನತವರ್ಗಗಳು ತಳಸಮುದಾಯವನ್ನು ಜಾತಿಯ ಹೆಸರಿನಲ್ಲಿ ಶೋಧಿಸಿದರೆ, ಇನ್ನೊಂದೆಡೆ ಈ ಸಮುದಾಯದ ಹೆಣ್ಣನ್ನು ಉನ್ನತವರ್ಗದವರು ಭೋಗದ ವಸ್ತುವಾಗಿ ರೂಪಿಸಿಕೊಂಡಿದ್ದಾರೆ. ಇಲ್ಲಿ ಶೋಷಣೆಯ ವಿವಿಧ ನೆಲೆಗಳನ್ನು ಕಾದಂಬರಿಕಾರರು ವಾಸ್ತವದ ನೆಲೆಯಲ್ಲಿ ಚಿತ್ರಿಸಿರುವುದು ಕಂಡುಬರುತ್ತದೆ.

**ಪಂಚಾಯಿತಿ ವ್ಯವಸ್ಥೆ**

ತಳಸಮುದಾಯಗಳು ಸಮಾಜದ ಅಂಚಿನಿಂದ ದೂರ ಉಳಿದು ತಮ್ಮದೇ ಆದ ಬದುಕಿನ ನೆಲೆಯಲ್ಲಿ ಕಟ್ಟಿಕೊಂಡಿರುತ್ತವೆ. ಇಲ್ಲಿ ಕಂಡುಬರುವ ಹವನ ತಾಂಡದ ಜನರು ತಮ್ಮದೇ ಆದ ನ್ಯಾಯ ಪಂಚಾಯಿತಿ ವ್ಯವಸ್ಥೆಯನ್ನು ರೂಪಿಸಿಕೊಂಡಿರುವುದು ತಿಳಿದುಬರುತ್ತದೆ. ಇವರು ತಮ್ಮ ಬದುಕಿಗೆ ಸಂಬಂಧಿಸಿದ ನೀತಿ, ನಿಯಮ, ಕಟ್ಟಳೆಗಳಿಗೆ ಬದ್ಧವಾಗಿ ಜೀವನ ರೂಪಿಸಿಕೊಂಡಿದ್ದಾರೆ. ಹವನ ತಾಂಡದ ಜನರು ತಮ್ಮ ಹಿರಿಯರ ಸಮ್ಮುಖದಲ್ಲಿ ತಮ್ಮ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವ ವಿಶಿಷ್ಟ ಪರಂಪರೆಯನ್ನು ಅನಾದಿ ಕಾಲದಿಂದಲೂ ನಡೆಸಿಕೊಂಡು ಬಂದಿದ್ದಾರೆ. ಇಲ್ಲಿ ನ್ಯಾಯ ತೀರ್ಮಾನಕ್ಕೆ ತಾಂಡದಲ್ಲಿನ ಬೇವಿನ ಮರದ ಅಡಿಯಲ್ಲಿಯೇ ಕುಳಿತು ತಮ್ಮ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುತ್ತಾರೆ. ಈ ಮರವು ಈ ಜನಾಂಗದ ಪರಂಪರೆಯ ಪ್ರತೀಕವಾಗಿಯೂ ಕಂಡುಬರುವುದನ್ನು ಪ್ರಸ್ತುತ ಕಾದಂಬರಿಯಲ್ಲಿ ಗುರುತಿಸಬಹುದಾಗಿದೆ. ತಮ್ಮ ಸಮುದಾಯದ ಪ್ರತಿಯೊಬ್ಬರು ಈ ಪಂಚಾಯಿತಿ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಾರೆ. ಅಷ್ಟೇ ಅಲ್ಲದೆ ಸಮಸ್ಯೆಗೆ ಪರಿಹಾರ ಸೂಚಿಸಿ ಹಿರಿಯರೆಲ್ಲರೂ ತೆಗೆದುಕೊಳ್ಳುವ ನಾಯಬದ್ಧವಾದ ತೀರ್ಪಿಗೆ ಪ್ರತಿಯೊಬ್ಬರು ತಲೆಭಾಗಬೇಕಾಗುತ್ತದೆ. ಈ ಸಮುದಾಯದ ಯಾರೂ ಕೂಡ ಈ ತೀರ್ಮಾನವನ್ನು ಉಲ್ಲಂಘಿಸುವಂತಿಲ್ಲ. ಇದು ಹವನ ತಾಂಡದ ವಿಶಿಷ್ಟವಾದ ಪಂಚಾಯಿತಿ ವ್ಯವಸ್ಥೆಯಾಗಿ ಕಂಡುಬರುತ್ತದೆ.

**ಸೇವಾಲಾಲ ಮಹಿಮೆ**

ಪ್ರತಿಯೊಂದು ಬುಡಕಟ್ಟು ಸಮುದಾಯಗಳು ಕೂಡ ತಮ್ಮದೇ ಆದ ಸಾಂಸ್ಕೃತಿಕ ವೀರನನ್ನು ತಮ್ಮ ಆರಾಧ್ಯ ನೆಲೆಯಲ್ಲಿ ನಂಬಿಕೊಂಡು ಬಂದಿದ್ದಾರೆ. ಈ ಬುಟಕಟ್ಟು ವೀರರು

ಪುರೋಹಿತಶಾಹಿಯು ರೂಪಿಸಿಕೊಂಡಿರುವ ದೇವರಿಗಿಂತ ಭಿನ್ನವಾಗಿರುವುದು ಕಂಡುಬರುತ್ತದೆ. ಈ ವೀರನು ಅನ್ಯನಾಗಿರುವುದಿಲ್ಲ. ತಮ್ಮ ಸಮುದಾಯದ ಪ್ರಗತಿಗಾಗಿ ಹೋರಾಡಿದ ಮಹಾಪುರುಷನೇ ಇವರ ಆರಾಧ್ಯ ದೈವವಾಗಿರುತ್ತಾನೆ. ಈ ಜನಾಂಗದ ವೀರ ದೈವಿಕ ಪುರುಷನಾಗಿ ಸೇವಾಲಾಲನನ್ನು ಗುರುತಿಸಿಕೊಂಡಿದ್ದಾರೆ. ತಲತಲಾಂತರಗಳಿಂದ ಈ ವೀರನನ್ನು ಭಜಿಸುತ್ತಾ, ಆರಾಧಿಸುತ್ತಾ ಬಂದಿದ್ದಾರೆ. ಇಂತಹ ಮಹಾನ್ ಪುರುಷ ಮನುಷ್ಯನೂ ಹೌದು ದೈವೀ ಪುರುಷನೂ ಹೌದು. ಇವನು ಆದಿಶಕ್ತಿಯೊಡನೆ ಯುದ್ಧಕ್ಕೆ ಇಳಿದು ಮಾನಸಿಕವಾಗಿ ಗೆಲ್ಲುತ್ತಾನೆ. ಇದರಿಂದ ಲಮಾಣಿ ತಾಂಡದಲ್ಲಿ ಸೇವಾಲಾಲ ಮತ್ತು ಮರಿಯಮ್ಮ ದೇವಿ ಗುಡಿಗಳು ಇರುವುದು ಕಂಡುಬರುತ್ತದೆ. ಈ ಗುಡಿಗಳ ಮುಂದೆ ಬಿಳಿ ಮತ್ತು ಕೆಂಪು ಧ್ವಜಗಳು ಯಾವಾಗಲೂ ಹಾರಾಡುತ್ತವೆ. ದೈವತ್ವಗಳು ಈ ಸಮುದಾಯ ಮನುಷ್ಯನ ಅಂತರಂಗದಲ್ಲಿ ಅಡಗಿರುವ ಎರಡು ಶಕ್ತಿಗಳಾಗಿವೆ. ಒಂದು ಸಾತ್ವಿಕ ಶಕ್ತಿಯಾದರೆ ಮತ್ತೊಂದು ತಾಮಸ ಶಕ್ತಿಯಾಗಿದೆ. ಈ ಅಂಶಗಳನ್ನು ಸೇವಲಾಲ ಮತ್ತು ಮರಿಯಮ್ಮನನ್ನು ಸಂಕೇತಿಸುವ ಮೂಲಕ ಮನುಷ್ಯನ ಒಳಗೂ ಮತ್ತು ಹೊರಗೂ ನಡೆಯುವ ಒಳಿತು–ಕೆಡುಕುಗಳ ಸ್ವರೂಪವಾಗಿದೆ ಎನ್ನುವಂತಹದ್ದನ್ನು ಲೇಖಕರು ಇಲ್ಲಿ ನಿರೂಪಿಸಿದ್ದಾರೆ.

**ಲಮಾಣಿ ಸಮುದಾಯದ ಮದುವೆ ಸಂಪ್ರದಾಯ**

ಪ್ರತಿಯೊಂದು ಸಮಾಜಕ್ಕೂ ಅದರದೆಯಾದ ಒಂದು ವಿಶಿಷ್ಟ ಸಂಪ್ರದಾಯ, ಆಚರಣೆಗಳು ಇದ್ದೆ ಇರುತ್ತವೆ. ಲಮಾಣಿ ಸಮುದಾಯದ ಸಂಪ್ರದಾಯಗಳಲ್ಲಿ ಮದುವೆಯಾಂದು ವಿಶಿಷ್ಟ ವಿಧಿವಿಧಾನವಾಗಿದೆ. ಸೋಮಾಲ್ಯನಾಯಕ ಸಂಪ್ರದಾಯಸ್ಥನಾದರೂ ತನ್ನ ಉದಾರತೆಯಿಂದ 'ಲಿಂಬ್ಯಾ ಮತ್ತು ರುಕ್ಕಿ'ಯ ಮದುವೆ ನಿಶ್ಚಯ ಮಾಡುತ್ತಾನೆ. ಅವಳ ಮೇಲಿನ ಪ್ರೀತಿ ಈ ಮದುವೆಗೆ ಕಾರಣವಾಗಿದೆ. ಪ್ರತಿಯೊಬ್ಬರೂ ಅನ್ಯೋನ್ಯತೆಯಿಂದ ಒಂದೊಂದು ಕಾರ್ಯವನ್ನು ವಹಿಸಿಕೊಂಡು ಅಚ್ಚುಕಟ್ಟಾಗಿ ನಿರ್ವಹಿಸುವರು. ಮದುಮಗನಾದ ಲಿಂಬ್ಯಾನಿಗೆ ಲೇರಿಯಾನಾಗಿ ಕಸನು ತನ್ನ ಕಾರ್ಯ ನಿರ್ವಹಿಸುತ್ತಾನೆ. ಲೇರಿಯಾ ಎಂದರೆ ಮದುಮಗನು ಸಂಕಷ್ಟ ತಾಪತ್ರಯದಲ್ಲಿ ಸಿಲುಕಿದಾಗ ಅಪ್ತನಾಗಿ ಕಾಪಾಡುವವನು. ಎಲ್ಲರೂ ಒಂದೇ ತಾಂಡದವರಾಗಿದ್ದರಿಂದಲೂ ಸಂಭ್ರಮ ಸಡಗರದಿಂದ ಕೂಡಿತ್ತು. ಇವರ ಮದುವೆಯ ಪ್ರತಿಯೊಂದು ವಿಧಿವಿಧಾನಕ್ಕೆ ಒಂದೊಂದು ಅರ್ಥವಿದೆ. ಇವು ಗಂಡು ಹೆಣ್ಣಿನ ಸಂಬಂಧವನ್ನು ಗಟ್ಟಿಗೊಳಿಸುತ್ತವೆ. ತಮಾಷೆ, ಒಗಟು, ಹಾಡು, ಕುಣಿತಗಳಿಂದ ಮದುವೆ ಲವಲವಿಕೆಯಿಂದ ತುಂಬಿ ತುಳುಕುತ್ತದೆ. ತಿಲಕ ಹಚ್ಚುವುದು, ಸುರಗಿ ನೀರು ಹಾಕುವುದು, ಮಾಂಗಲ್ಯಧಾರೆ ಹೀಗೆ ಹಂತ ಹಂತವಾಗಿ ಅನೇಕ ಕಾರ್ಯಗಳನ್ನು ಮಾಡಿ ಮುಗಿಸುತ್ತಾರೆ. ನಂತರ ರುಕ್ಕು ಗಂಡನ ಮನೆಗೆ ಹೋಗುವ ಸಮಯದಲ್ಲಿ ಅಳುವುದು ಹೃದಯ ಕಲಕುತ್ತದೆ. "ನಾನು ನನ್ನ ಬಾಪುನನ್ನು ನೋಡಲಿಲ್ಲ, ಅದ್ರ ನನಗ ನನ್ನ ಬಾಪುಗಿಂತ ಹೆಚ್ಚು ಮಾಡೀರಿ"[೨೮] ಎಂಬುದಾಗಿ ರುಕ್ಕಿಯು ತನ್ನ ಕೃತಜ್ಞತೆಯನ್ನು

ಸಲ್ಲಿಸುವಳು. ಈ ಭಾವನಾತ್ಮಕ ಸಂಬಂಧಗಳಿಂದಾಗಿ ಇಲ್ಲಿನ ಮದುವೆಯು ಹೆಚ್ಚು ಮಹತ್ವವನ್ನು ಪಡೆದುಕೊಳ್ಳುತ್ತದೆ.

**ಆರ್ಥಿಕ ಸ್ಥಿತಿ**

ಅಲೆಮಾರಿ ಜನಾಂಗವಾದ ಲಮಾಣಿ ಸಮುದಾಯವು ಆರ್ಥಿಕತೆಯ ಬಿಕ್ಕಟ್ಟಿನಿಂದಾಗಿ ಸಮಾಜದ ಅಂಚಿನಲ್ಲಿ ಬದುಕುವಂತಹದಾಗಿದೆ. ಅಲ್ಲದೆ ಕಾಡನ್ನು ಇಲ್ಲವೇ ಉಳ್ಳವರನ್ನು ಅವಲಂಬಿಸಿ ಬದುಕುವ ಸಮುದಾಯವಾಗಿದೆ. ಇದಕ್ಕೆ ಕಾರಣ ಶಿಕ್ಷಣ ಹಾಗೂ ಇತರೆ ಮೂಲಭೂತ ಅವಕಾಶಗಳಿಂದ ವಂಚಿತರಾಗಿರುವುದಾಗಿದೆ. ಇವರು ಒಂದು ಹೊತ್ತಿನ ಗಂಜಿಗಾಗಿ ಶ್ರಮದಿಂದ ದುಡಿಯುವ ಜನರಾಗಿದ್ದಾರೆ. ಇವರಿಗೆ ಸ್ವಂತಭೂಮಿ ಇಲ್ಲದ್ದಕ್ಕಾಗಿ ಬಂಡವಾಳಶಾಹಿಗಳು ಹಾಗೂ ಜಮೀನ್ದಾರರ ಹೊಲಗಳಲ್ಲಿ ದುಡಿಯುತ್ತಾ ಅವರ ಕೈಕೆಳಗೆ ಬದುಕುವಂತಾಗಿದೆ. ಕುಲಕಸುಬು, ಉಪವೃತ್ತಿಯನ್ನು ನಂಬಿಕೊಂಡಿರುವುದರಿಂದ ಆರ್ಥಿಕ ಅಸಮಾನತೆ ಎದ್ದು ಕಾಡುತ್ತಿದೆ. ಈ ಜನಾಂಗವು ಕನಿಷ್ಠ ಜೀವನಾಂಶಗಳು ದೊರಕದೆ ತತ್ತರಿಸಿ ಹೋಗಿದೆ. ಆಧುನೀಕರಣದ ಪ್ರಭಾವದಿಂದ ಮೂಲ ಸಂಸ್ಕೃತಿಗೆ ಸಂಚಕಾರ ಬಂದೊದಗಿದೆ. ಇದರಿಂದ ಅವರ ಬದುಕು ಅತಂತ್ರ ಸ್ಥಿತಿಯನ್ನು ತಲುಪಿದೆ. ಹೀಗಾಗಿ ಅವರ ತುತ್ತಿನ ಚೀಲ ತುಂಬಲಾಗದೆ ಶೋಚನೀಯ ಪರಿಸ್ಥಿತಿ ಎದುರಿಸಬೇಕಾಗಿದೆ. ಈ ಸಮುದಾಯದೊಳಗೆ ಇರುವಂತಹ ಸಂಪ್ರದಾಯಗಳು, ಧಾರ್ಮಿಕ ಆಚರಣೆಗಳು, ಮೂಢನಂಬಿಕೆಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕಾಗಿರುವುದರಿಂದಲೂ ಆರ್ಥಿಕ ಸಂಕಷ್ಟವನ್ನು ಎದುರಿಸುತ್ತಾರೆ. ಇವರು ಕೆಲವೊಮ್ಮೆ ಬದುಕಿನ ಅನಿವಾರ್ಯತೆಗಾಗಿ ಅನೇಕ ಅಮಾನುಷ ಕ್ರಿಯೆಗಳಾದ ಕಳ್ಳತನ, ಹೆಂಡತಿಯರನ್ನು ಮಾರುವುದನ್ನು ಮೈಗೂಡಿಸಿಕೊಂಡು ಬಂದಿದ್ದಾರೆ. ಆರ್ಥಿಕ ಹೊರೆ ಮತ್ತು ಹೊಟ್ಟೆ ತುಂಬಿಸಿಕೊಳ್ಳುವ ಸಲುವಾಗಿ ಕುರಿಗಳ್ಳತನ ಮಾಡುವುದು ಮತ್ತು ಹೊಲದ ಫಸಲು ಬಂದಾಗ ಜೋಳದ ತೆನೆ, ಹೆಸರಕಾಯಿ, ಶೇಂಗಾ ಕದ್ದು ತಂದು ಅಪರಾತ್ರಿಯಲ್ಲಿ ಮನೆಯ ಮಂದಿಯೆಲ್ಲ ಕೂಡಿ ತಿಂದು ತಮ್ಮ ಹಸಿವಿನ ದಾಹವನ್ನು ನೀಗಿಸಿಕೊಳ್ಳುವ ಪ್ರಸಂಗ ಕಂಡುಬರುತ್ತದೆ. ಗಂಡ ಸತ್ತಿದ್ದಕ್ಕಾಗಿ ಡುಗ್ಗಿಬಾಯಿ ದಾರು(ಕಳ್ಳಬಟ್ಟಿ) ಮಾರುವುದು, ಜಮೀನ್ದಾರರ ಮನೆಯಲ್ಲಿ ಜೀತ, ಹೊಲಗದ್ದೆಗಳಲ್ಲಿ ದುಡಿಯುವಂತಹದನ್ನು ಕಾಣುತ್ತೇವೆ. ಇವರು ಕಟ್ಟಿಗೆ ಮಾರುವಂತಹ ವೃತ್ತಿ ಮಾಡುವರು. ಅದಕ್ಕಾಗಿ ಗುಡ್ಡಗಾಡುಗಳನ್ನು ಈ ಜನಾಂಗವು ಅವಲಂಬಿಸಿಕೊಂಡು ಬಂದಿದೆ. ಆದರೆ ವ್ಯವಸ್ಥೆಯು ಇವರ ಎಲ್ಲಾ ಹಕ್ಕುಗಳನ್ನು ಕಸಿದುಕೊಳ್ಳುವ ಮೂಲಕ ಇವರನ್ನು ದಿವಾಳಿತನಕ್ಕೆ ತಂದು ನಿಲ್ಲಿಸಿದೆ. ಇಂತಹ ಪರಿಸ್ಥಿತಿಯಿಂದ ಈ ಸಮುದಾಯವನ್ನು ಮುಕ್ತಗೊಳಿಸುವ ಆಶಯವನ್ನು ಹೊತ್ತ ತಾಂಡದ ವಿಚಾರವಾದಿಯಾದ ಸೋಮಾಲ್ಯನು ತಮ್ಮ ತಾಂಡದ ಮಕ್ಕಳಿಗೆ ಶಿಕ್ಷಣ ಕೊಡಿಸಲು ಮುಂದಾಗುತ್ತಾನೆ. ಶೈಕ್ಷಣಿಕ ಪ್ರಗತಿಯಿಂದ ಮಾತ್ರ ತಾಂಡದ ವಿಮೋಚನೆ ಸಾಧ್ಯವೆಂದು ನಂಬಿರುವ ಸೋಮಾಲ್ಯನು ತನ್ನ

ಮೂಲಸಂಸ್ಕೃತಿಗೆ ಧಕ್ಕೆಯಾಗದಂತೆ ಪ್ರಗತಿಯತ್ತ ನಡೆಯುವ ಆಶಯವೊತ್ತಿರುವುದನ್ನು ಪ್ರಸ್ತುತ ಕಾದಂಬರಿಯಲ್ಲಿ ಗುರುತಿಸಬಹುದಾಗಿದೆ.

**ವೃತ್ತಿಪಲ್ಲಟ**

ತಳಸಮುದಾಯಗಳು ತಮ್ಮ ಕುಲಮೂಲ ವೃತ್ತಿಗೆ ಮಾತ್ರ ಸೀಮಿತವಾಗಿರುವುದರಿಂದ ಬಡತನದ ಬೇಗೆಯಲ್ಲಿ ನರಳುವಂತಾಗಿದೆ. ಆರ್ಥಿಕ ಸಂಕಷ್ಟವನ್ನು ಎದುರಿಸುವ ಕಾರಣ ಭೂಮಿ ಪಡೆದು ಸ್ವತಂತ್ರ ಬದುಕು ಕಟ್ಟಿಕೊಳ್ಳುವ ತುಡಿತ ಮತ್ತು ಹಂಬಲವನ್ನು ಪುರಸ್ಕರಿಸುವ ಮೂಲಕ ಹೀರಲಾಲನ ಸಲಹೆಯಂತೆ ಭೂಮಿಯನ್ನು ಪಡೆಯಲು ಮುಂದಾಗುತ್ತಾರೆ. ಆಗ ಹೀರಾಲಾಲನು "ಕಾನೂನಿನ ಪ್ರಕಾರ ಗೋಮೊಳ ನಿಮದಾಗಿಸುವ ಬಗ್ಗೆ ಪ್ರಯತ್ನ ಮಾಡೋಣ ಆದರೆ ನಿಮ್ಮೆಲ್ಲ ಮಂದಿಯ ಬೆಂಬಲ ಬೇಕು, ಅದಕ್ಕೂ ಮುಂಚೆ ಧೈರ್ಯಮಾಡಿ ನೀವು ಗೋಮಾಳ ಸಾಗುವಳಿ ಮಾಡಾಕ ತಯಾರಾಗಬೇಕು"[೨೯] ಎಂಬುದಾಗಿ ತನ್ನ ಬೆಂಬಲವನ್ನು ವ್ಯಕ್ತಪಡಿಸುತ್ತಾನೆ. ಇಲ್ಲಿಂದ ಮುಂದುವರಿದು ಈ ಸಮುದಾಯವು ಕೃಷಿಯಲ್ಲಿ ತೊಡಗಿಕೊಳ್ಳಲು ಮುಂದಾಗುತ್ತದೆ.

ಈ ಕೃಷಿ ಕಾರ್ಯವನ್ನು ಆರಂಭಿಸಿದ ಸಮಯದಲ್ಲಿ ಊರಿನ ಜನತೆಯಿಂದ ಅನೇಕ ಸಂಕಷ್ಟಗಳನ್ನು ಎದುರಿಸಬೇಕಾಗುತ್ತದೆ. "ತಳವ್ ತುಂಬಿ ತಾಂಡಾ ಭರಪುರ ಆಗತ್ತಂದ್ರ ನಾ ಸಾಯಾಕ ತಯಾರದೀನಿ ನೋಡು...., ಎಂದಾದ್ರೂ ಒಂದು ದಿನ ಸಾಯುದೇ, ಇದಕ್ಕೆಂತ ಸತ್ತರ ಒಂದು ಪುಣ್ಣೇದ ಸಾವು ಅಗತೈತಿ"[೩೦] ತಮ್ಮ ಸಮುದಾಯದ ಸಂಕಷ್ಟ ಬಡತನದಿಂದ ಮುಕ್ತವಾಗಿ ನೆಮ್ಮದಿಯ ಜೀವನ ಸಿಗುತ್ತದೆ ಎನ್ನುವಂತಾದರೆ ಅದಕ್ಕಾಗಿ ನನ್ನ ಜೀವನ ಮುಡುಪಾಗಿಡುತ್ತೇನೆ ಎನ್ನುವ ಆದರ್ಶ, ತ್ಯಾಗ ಮನೋಭಾವದ, ಪ್ರಗತಿಪರ ವೈಚಾರಿಕತೆ ಮೆರೆಯುವುದನ್ನು ಸೋಮಾಲ್ಯನ ಮೂಲಕ ಗುರುತಿಸಿದ್ದಾರೆ.

ಗೋಮಾಳದಲ್ಲಿ ಕೃಷಿ ಆರಂಭವಾದ ಸಮಯದಿಂದ ತಾಂಡದ ಪ್ರತಿಯೊಬ್ಬರ ಕಾರ್ಯ ಚಟುವಟಿಕೆ ಬದಲಾಗಿದೆ. ತಮ್ಮಲ್ಲಿ ಇರುವ ಕೆಟ್ಟ ಚಟ ಅಮಾನವೀಯ ದಂಧೆಗಳನ್ನು ನಿಲ್ಲಿಸಿ ಧನ್ಯತಾ ಮನೋಭಾವದಿಂದ ಎಲ್ಲರೂ ಶ್ರಮದಿಂದ ದುಡಿಯುತ್ತಾರೆ. ಎಲ್ಲರಿಗೂ ಉಳುಮೆ ಮಾಡಲು ಎತ್ತುಗಳು ಇಲ್ಲವಾದರೂ ಸಾಮೂಹಿಕ ಬಿತ್ತನೆ ಮಾಡಿ, ಹೆಚ್ಚು ಕಡಿಮೆ ಎನ್ನದೆ ದುಡಿದು ಒಗಟ್ಟಿನಲ್ಲಿ ಬಲವಿದೆ ಅದಕ್ಕಾಗಿ ಒಂದಾಗಿ ದುಡಿದು ಸಮಸ್ಯೆಯನ್ನು ಎದುರಿಸುವ ಆಶಯವನ್ನು ವ್ಯಕ್ತಪಡಿಸಿರುವುದನ್ನು ಇಲ್ಲಿ ಗುರುತಿಸಲಾಗಿದೆ. ಇಲ್ಲಿ ಕಂಡುಬರುವ 'ವೃತ್ತಿಪಲ್ಲಟ'ವು ಪ್ರಗತಿಗೆ ಪೂರಕವಾದ ಮಾರ್ಗವಾಗಿದೆ. ಆದ್ದರಿಂದ ಎಲ್ಲರೂ ಒಮ್ಮತದಿಂದ ಈ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ.

## ರಾಜಕೀಯ ಪರಿಚಯ

ನಾಗರಿಕ ಪ್ರಪಂಚದಿಂದ ದೂರ ಉಳಿದು ಒಂದು ಸಮಾಜದ ಅಂಚಿನಲ್ಲಿ ಬದುಕುತ್ತಿರುವ ಈ ಜನಾಂಗವು ಸಮಾಜ ಗುರುತಿಸದ ರೀತಿಯಲ್ಲಿ ಉಳಿದುಕೊಂಡಿರುವುದು ಕಂಡುಬರುತ್ತದೆ. ಅಲ್ಲದೆ ತನ್ನದೇ ನೆಲೆಗಟ್ಟಿನ ಬಿಕ್ಕಟ್ಟು, ತೊಳಲಾಟ, ಅಂಧತ್ವದಲ್ಲಿ ಮುಳುಗಿಹೋಗಿದೆ. ಇಂತಹ ಸಮುದಾಯವು ರಾಜಕೀಯ ರಂಗಕ್ಕೆ ತೆರೆದುಕೊಳ್ಳವ ಬಗೆಯನ್ನು ಪರಿಚಯಿಸುವುದನ್ನು ಹವನ ಕಾದಂಬರಿಯಲ್ಲಿ ಗುರುತಿಸಬಹುದಾಗಿದೆ. ಅಂದರೆ ರಾಜಕೀಯ ವ್ಯಕ್ತಿಯಾದ ಜಗದೀಶನ ಮೂಲಕ ಈ ತಾಂಡಕ್ಕೆ ರಾಜಕೀಯವು ಪ್ರವೇಶಿಸುತ್ತದೆ. ಪಂಚಾಯ್ತಿ ಎಲೆಕ್ಷನ್ನಿನ ಬಗ್ಗೆ ಪರಿಚಯಿಸಿದ ಇವನು, ನಿಮ್ಮ ತಾಂಡಕ್ಕೆ ಒಂದು ಸ್ಥಾನವಿದೆ. ಅದಕ್ಕೆ ನಿಮ್ಮ ಸಮುದಾಯದ ಒಬ್ಬನನ್ನು ಆಯ್ಕೆ ಮಾಡಬೇಕು ಎಂದು ಅವರಿಗೆ ಮನವರಿಕೆ ಮಾಡುತ್ತಾನೆ. ಇದರ ಚಹರೆ ಅರಿಯದ ಈ ಸಮುದಾಯದ ಹಿರಿಯರು ತಮ್ಮ ಯುವಶಕ್ತಿಯನ್ನು ಬಳಸಿಕೊಳ್ಳುವಂತೆ ಹೇಳಿದಾಗ, ನೀವು ನಿಮ್ಮ ಪ್ರಪಂಚದಾಗ ಇದ್ದರೆ ನೆಡೆಯೋದಿಲ್ಲ. ಹೊರಜಗತ್ತಿನೊಂದಿಗೆ ಸಂಪರ್ಕ ಬೆಳೆಸಬೇಕು. ಇಂತಹ ರಾಜಕೀಯ ವ್ಯವಸ್ಥೆ ಬಂದರೆ ಮಾತ್ರ ಮೂಲಬದುಕಿನಿಂದ ಮುಂದುವರಿಯಲು ಸಾಧ್ಯ, ಇದರ ಪರಿಚಯದಿಂದ ಬೆಳವಣಿಗೆಯಾಗಿ ಉತ್ತಮ ಸ್ಥಾನಮಾನಗಳು ದೊರಕುತ್ತವೆ ಎಂಬುದಾಗಿ ಪರಿಚಯಿಸುತ್ತಾನೆ. ಇದರಿಂದ ಪರಿವರ್ತನೆಗೊಂಡು ಈ ತಾಂಡದ ಜನರು 'ಲೋಕು'ನನ್ನು ಕಲ್ಲೂರು ತಾಂಡದ ನಾಯಕನ್ನಾಗಿ ಸೂಚಿಸುತ್ತಾರೆ. ಈ ರಾಜಕೀಯವು ಒಂದು ಕಡೆ ಪ್ರಗತಿಯತ್ತ ಮುನ್ನಡೆದರೆ, ಮತ್ತೊಂದೆಡೆ ಮೂಲಬದುಕಿನಿಂದ ದೂರ ಸರಿದು ತಮ್ಮ ಸಂಸ್ಕೃತಿಯನ್ನು ತೊಡೆದುಹಾಕಿ ಅರಾಜಕತೆಯನ್ನು ಸೃಷ್ಟಿಸುತ್ತದೆ. ಅಮಾಯಕ ಜನರನ್ನು ಬಳಸಿಕೊಂಡು ಪ್ರಜಾಪ್ರಭುತ್ವದ ಹೆಸರಿನಲ್ಲಿ ನಡೆಯುವ ಅಕ್ರಮಗಳನ್ನು ಇಲ್ಲಿನ ರಾಜಕೀಯ ನೆಲೆಯಲ್ಲಿ ಅನಾವರಣಗೊಳಿಸಿರುವುದನ್ನು ಪ್ರಸ್ತುತ ಕಾದಂಬರಿಯಲ್ಲಿ ಗುರುತಿಸಬಹುದಾಗಿದೆ.

## ಜಮೀನ್ದಾರಿ ವ್ಯವಸ್ಥೆ

ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಸನಾತನವಾದಿಗಳು ನಿರ್ಮಿಸಿಕೊಂಡು ಬಂದಿರುವ ಕಟ್ಟಳೆಯಲ್ಲಿ ತಳಸಮುದಾಯಗಳನ್ನು ಕೆಳಸ್ತರದಲ್ಲಿ ಇಟ್ಟುಕೊಂಡು ಬಂದಿದೆ. ಅಲ್ಲದೆ ಅದು ಈಗಲೂ ಮುಂದುವರಿಯುತ್ತಿರುವುದನ್ನು ಕಾಣುತ್ತೇವೆ. ಸಾಮಾನ್ಯ ಜನರನ್ನು ತಮ್ಮ ಅಧೀನತೆಯಲ್ಲಿ ಒಳಪಡಿಸಿಕೊಂಡು ಕನಿಷ್ಠ ಮೂಲಭೂತ ಸೌಕರ್ಯದಿಂದ ಇವರನ್ನು ದೂರವಿಟ್ಟು ಅಮಾನವಿಯ ಬದುಕು ಸಾಗಿಸುವಂತೆ ಮಾಡಿದೆ. ಅಲ್ಲದೆ ಇವರ ಸ್ವಂತ ನಿರ್ಧಾರ, ಅಭಿಪ್ರಾಯಗಳಿಗೆ ಮನ್ನಣೆ ನೀಡದೆ ಅವರನ್ನು ಕುಬ್ಜರನ್ನಾಗಿ ಮಾಡಿದ್ದಾರೆ. ಇಲ್ಲಿ ತಳಸಮುದಾಯದ ಲಮಾಣಿಗರು ಸಮಾಜ ಅಂಚಿನಲ್ಲಿ ಬದುಕಿದರೂ ತಮ್ಮದೇ ಆದ ನೀತಿಸಂಹಿತೆಯಲ್ಲಿ ಊರಿನ ಬೇಡರ ಹುಡುಗನಾದ ಲಚ್ಚಿಮ್ಯಾ ಮತ್ತು ರುಕ್ಕಿಯ ನಡುವಿನ ಪ್ರೇಮ ಪ್ರಕರಣಕ್ಕೆ ಒಪ್ಪಿಗೆ ನೀಡಿ ಮದುವೆ ಮಾಡಲು

ಲಮಾಣಿಗರು ನಿರ್ಧಾರ ತೆಗೆದುಕೊಂಡಿದ್ದು ಊರಿನ ಜನಗಳಿಗೆ ತಿಳಿಯುತ್ತದೆ. ಅಲ್ಲದೆ ಯಂಕಪ್ಪ ತನ್ನ ಮಗಳನ್ನು ಕೊಟ್ಟು ಮದುವೆ ಮಾಡುವ ಆಸೆಯು ಕೈತಪ್ಪಿ ಹೋಗುವುದು ಎಂದು ಅರಿತು, ಊರಿನ ಮೇಲುವರ್ಗದವರನ್ನು ಕೂಡಿಸಿ "ತಾಂಡಾದ ಮಂದಿಗೆ ಹಿಂಗ ಸವಲತ್ತು ಕೊಡ್ತಾ ಹೋದ್ರ ನಾಳೆ ನಮ್ಮನ್ನ ನುಂಗೆ ಬಿಡ್ತಾರ, ನಾವು ಹುಷರಾಗಿರಬೇಕು ಅನ್ನುದಕ್ಕ ಇದೊಂದು ಎಚ್ಚರಿಕೆ ಗಂಟಿ"[೩೧] ಎಂಬುದಾಗಿ ಲಮಾಣಿ ಜನಾಂಗದ ವಿರುದ್ಧ ಎತ್ತಿಕಟ್ಟುತ್ತಾನೆ. ತನ್ನ ಕುತಂತ್ರದಿಂದ ಇಲ್ಲಿನ ಅಂತರ್ಜಾತಿ ವಿವಾಹವನ್ನು ತಪ್ಪಿಸುತ್ತಾನೆ. ಇದರಿಂದ ಲಮಾಣಿ ಜಾತಿಯ ರುಕ್ಕಿಯ ಬದುಕು ಅತಂತ್ರವಾಗುತ್ತದೆ.

ತಳಸಮುದಾಯದ ಲಮಾಣಿಗರು ತಮ್ಮ ಅಸ್ತಿತ್ವದ ಉಳಿವಿಗಾಗಿ ಮತ್ತು ತಮ್ಮ ಬದುಕನ್ನು ಸ್ವತಂತ್ರವಾಗಿ ಕಟ್ಟಿಕೊಳ್ಳಬೇಕೆಂಬ ಆಶೆಯಿಂದ ಇವರ ಕನಿಷ್ಠ ವೃತ್ತಿಗಳನ್ನು ಬಿಟ್ಟು ಕೃಷಿಕಾರ್ಯದಲ್ಲಿ ತೊಡಗಲು ಮುಂದಾಗುತ್ತಾರೆ. ಇವರ ಬಯಕೆಯನ್ನು ಈಡೇರಿಸಲು ಪ್ರಸ್ತುತ ಕಾದಂಬರಿಯಲ್ಲಿನ ನಿರೂಪಕನಾದ ಬಸಪ್ಪ ಮಾಸ್ತರ ಕೈಜೋಡಿಸಿ ಬಂಜಾರ ಸಂಘದ ನಾಯಕ ಹೀರಾಲಾಲನ ಸಹಕಾರದಿಂದ ಈ ಜನಾಂಗವು ಊರ ಗೋಮಾಳದಲ್ಲಿ ಸಾಮೂಹಿಕ ಕೃಷಿಯನ್ನು ಪ್ರಾರಂಭಿಸುತ್ತಾರೆ. ಇದೊಂದು ಇವರಿಗೆ ಹೆಮ್ಮೆಯ ಮತ್ತು ಆತ್ಮವಿಶ್ವಾಸ ಕ್ಷಣವಾಗಿದೆ ಹಾಗೂ ಬಹುಕಾಲದಿಂದ ಕೃಷಿಕರಾಗಬೇಕೆಂಬ ಆಶೆಯು ಈಗ ಕೈಗೂಡಿದೆ. ಇದರಿಂದ ಕಲ್ಲೂರಿನ ಭೂಮಾಲೀಕರಿಗೆ ಎರಡು ರೀತಿಯಲ್ಲಿ ಬಿಸಿ ತಟ್ಟುತ್ತದೆ. ಮೊದಲನೆಯದು ಭೂಮಾಲೀಕರ ಹೊಲಗಳಲ್ಲಿ ಕಾರ್ಮಿಕ ಸಂಖ್ಯೆಯಲ್ಲಿ ಕಡಿಮೆಯಾಗಿರುವುದು, ಎರಡನೆಯದು ಸ್ವಂತ ಜಮೀನಿನ ಆಧಾರವಿಲ್ಲದೆ ಲಮಾಣಿಗರು ಅಲ್ಲಿ ಸಾಗುವಳಿ ಮಾಡಿರುವುದು ಕಾನೂನಿನ ಪ್ರಶ್ನೆಯನ್ನು ಎತ್ತಿದೆ. ಬೆಳೆದುನಿಂತ ಫಸಲಿನ ಹೊಲದಲ್ಲಿ ದನಕರುಗಳನ್ನು ನುಗ್ಗಿಸಿ ಲಮಾಣಿ ತಾಂಡದ ಮೇಲೆ ದಾಳಿ ಮಾಡಿದರು. ಅವರನ್ನು ಹೊಡೆದು ಹಿಂಸಿಸಿ ಕಲ್ಲೂರು ಭೂಮಾಲೀಕರು ತಮ್ಮ ಸಿಟ್ಟು ಆಸಹನೆ ಮತ್ತು ಆಕ್ರೋಶವನ್ನು ವ್ಯಕ್ತಪಡಿಸುತ್ತಾರೆ. ಈ ಗಲಭೆಯಿಂದ ತಾಂಡದ ಬದುಕು ಅತಂತ್ರ ಸ್ಥಿತಿಯನ್ನು ತಲುಪುತ್ತದೆ. ನಂತರ ಹೀರಾಲಾಲನ ಮುಖಾಂತರ ಸೋಮಾಲ್ಯನ ಮಗ ಜಗ್ಗು ಕೋರ್ಟಿನಲ್ಲಿ ಹೋರಾಟ ನಡೆಸಿ ಗೋಮಾಳವನ್ನು ತಮ್ಮ ವಶಕ್ಕೆ ಪಡೆದು ಕೃಷಿಯನ್ನು ಆರಂಭಿಸುತ್ತಾರೆ. ಸ್ವಂತ ಭೂಮಿಯನ್ನು ಪಡೆದು ಸಾಮೂಹಿಕ ಕೃಷಿ ಮಾಡಿ ಶಿಕ್ಷಣ ಪಡೆಯುವ ಮೂಲಕ ಹೊಸ ರಾಜಕೀಯ ಪ್ರಜ್ಞೆಯನ್ನು ಪಡೆಯಲು ಮುಂದಾದ ಸಂದರ್ಭದಲ್ಲಿ ಬಂಡವಾಳಶಾಹಿಯು ಈ ಜಮೀನನ್ನು ಕಿತ್ತುಕೊಂಡು ಇಲ್ಲಿ ಕೈಗಾರೀಕರಣ ಪ್ರಾರಂಭವಾಗುವ ಮೂಲಕ ತಾಂಡದ ಮೂಲ ಸಂಸ್ಕೃತಿಯು ಪಲ್ಲಟಗೊಳ್ಳತ್ತದೆ. ಬಂಡವಾಳಶಾಹಿ ಮತ್ತು ಜಮೀನ್ದಾರಿ ವ್ಯವಸ್ಥೆಯಿಂದ ಇವರು ಅತಂತ್ರಗೊಂಡ ಬಗೆಯನ್ನು ಇಲ್ಲಿ ಅನಾವರಣಗೊಳಿಸಿರುವುದು ಕಂಡುಬರುತ್ತದೆ.

## ಕೈಗಾರೀಕರಣದಿಂದ ಬದಲಾದ ತಾಂಡದ ಪರಿಸರ

ಮೊದಲ ಭಾಗದಲ್ಲಿ ಕಲ್ಲೂರು ತಾಂಡ ಒಂದು ಹಚ್ಚಹಸಿರಿನ ಪರಿಸರ ನಡುವೆ ರಂಜಿಸುತ್ತಿರುವ ತಾಂಡವಾಗಿತ್ತು ಮತ್ತು ಪ್ರಶಾಂತತೆಯಿಂದ ಕೂಡಿತ್ತು. ಪ್ರೀತಿ, ಮಮತೆಯಿಂದ ಒಂದಾದ ಜೀವನಕ್ರಮದಲ್ಲಿ ಇಲ್ಲಿನ ಸಂಬಂಧಗಳು ಬೆಸೆದುಕೊಂಡಿದ್ದವು. ಆದರೆ ಕಾಲದ ಹೊಡೆತಕ್ಕೆ ಸಿಕ್ಕು ಆಧುನೀಕರಣದ ಪ್ರಭಾವದಿಂದ ಈ ತಾಂಡದ ಚಹರೆಗಳೇ ಬೇರೆಯಾಯಿತು. ಲೋಕು ಕಲ್ಲೂರನ್ನು ಕುಬೇರನ ಲೋಕವಾಗಿ ಪರಿವರ್ತಿಸುವ ಹಾಗೆ ತಾಂಡಕ್ಕೆ ರಾತ್ರಿಲೈಟುಗಳು, ಓವರ್‌ಹೆಡ್ ಟ್ಯಾಂಕುಗಳು, ಬೋರವೆಲ್‌ಗಳು, ಹೈಟೆಕ್ ಶಾಲೆಗಳು ರೂಪಿತವಾಗಿವೆ. ಅಲ್ಲದೆ ಗುಡಿಸಲು ಮನೆಗಳ ಜಾಗದಲ್ಲಿ ಕಾಂಕ್ರಿಟ್ ಮನೆಗಳು ತಲೆ ಎತ್ತಿವೆ. ಸೇವಾಲಾಲ ಮತ್ತು ಮರಿಯಮ್ಮ ಗುಂಡಿಗಳು ಪುನರ್ ನಿರ್ಮಾಣವಾಗಿದೆ. ಸೇವಾಲಾಲ ಮೂರ್ತಿ ಪ್ರತಿಷ್ಠಾಪನೆಯಾಗಿ ಇಲ್ಲಿ ಪುರೋಹಿತಶಾಹಿಯೊಂದು ತಲೆ ಎತ್ತಿದೆ.

ಹೀಗೆ ಲೋಕ ತನ್ನ ಸಮುದಾಯ ಬದಲಾವಣೆ ಮತ್ತು ಅವರ ಮುಂದುವರಿದ ಜೀವನಕ್ಕೆ ಮುಖಾಮುಖಿಯಾಗಿ ಹೊಸ ಪರಿಸ್ಥಿತಿಯನ್ನು ರೂಪಿಸಿರುವುದು ಇಲ್ಲಿ ಕಂಡುಬರುತ್ತವೆ. ಇಲ್ಲಿ ತಂದೆ ಮತ್ತು ಮಗನ ನಡುವೆ ವಿರುದ್ಧ ಧೋರಣೆಗಳು ಕಂಡುಬರತ್ತವೆ. ಸೋಮಾಲ್ಯ ಈ ಸಮುದಾಯದ ಪ್ರಗತಿಯನ್ನು ಬಯಸಿದ್ದು ತನ್ನ ಪರಂಪರೆಯನ್ನು ತೊಡೆಯದೆ, ತಮ್ಮ ಸಂಸ್ಕೃತಿಗೆ ಪೂರಕವಾದ ನೆಲೆಯಲ್ಲಿ ನಮ್ಮ ಜನತೆ ಪ್ರಗತಿಯನ್ನು ಕಟ್ಟಿಕೊಳ್ಳಬೇಕು ಎಂಬುದು ಇವನ ವಾದವಾಗಿತ್ತು. ಅದಕ್ಕಾಗಿ ಶಿಕ್ಷಣವನ್ನು ಬಯಸುತ್ತಾನೆ. ಇದರಿಂದ ಜಾಗೃತನಾಗಿ ಭೂಮಿಯನ್ನು ಪಡೆಯಲು ಮುಂದಾಗುತ್ತಾನೆ. ಆದರೆ ಇವನ ಮಗನಾದ 'ಲೋಕು' ಇದಕ್ಕೆ ತದ್ವಿರುದ್ಧವಾಗಿ ತನ್ನ ಹೋರಾಟವನ್ನು ಮುಂದುವರೆಸುತ್ತಾನೆ. ಬದಲಾದ ಆಧುನಿಕ ಬದುಕಿಗೆ ಮನಸೋತು ತನ್ನ ಮೂಲ ಪರಂಪರೆಗೆ ವಿಮುಖನಾಗುತ್ತಾನೆ. ಇದು ಇವನ ಕಾಲದ ಒತ್ತಡವಾಗಿ ಕಂಡುಬರುತ್ತದೆ. ಇಲ್ಲಿ ಕೈಗಾರಿಕೀಕರಣದ ಪ್ರಭಾವದಿಂದ ಉಂಟಾಗುವ ಆಧುನಿಕತೆ ಮತ್ತು ಪರಂಪರೆಯ ನಡುವಿನ ಸಂಘರ್ಷದ ನೆಲೆಗಳನ್ನು ಗಮನಿಸಬಹುದಾಗಿದೆ.

## ನಿರೂಪಣಾಕ್ರಮ

ಪ್ರಸ್ತುತ ಕಾದಂಬರಿಯಲ್ಲಿ ಒಂದು ವಿಶಿಷ್ಟ ನಿರೂಪಣಾಕ್ರಮವನ್ನು ಕಾದಂಬರಿಕಾರರು ಅನುಸರಿಸಿದ್ದಾರೆ. ಇಲ್ಲಿ ಕಾದಂಬರಿಯ ಆರಂಭದಿಂದ ಬಸಪ್ಪ ಮಾಸ್ತರನು ತನ್ನ ನಿರೂಪಣೆಯನ್ನು ಮುಂದುವರಿಸುತ್ತಾನೆ. ಈ ಮಾಸ್ತರನ ಪಾತ್ರವು ಪ್ರಗತಿಪರ ಹಾದಿಯತ್ತ ಈ ಸಮುದಾಯವನ್ನು ಜಾಗೃತಗೊಳಿಸಲು ಶ್ರಮಿಸುತ್ತದೆ. ಈ ಲಮಾಣಿ ತಾಂಡದ ಉಗಮ, ಇವರ ಜೀವನಕ್ರಮ, ಸಂಸ್ಕೃತಿ ಮತ್ತು ಸಂಪ್ರದಾಯವನ್ನು ಇಲ್ಲಿನ ನಿರೂಪಕನಾದ ಮಾಸ್ತರನು ಪರಿಚಯಿಸುತ್ತಾನೆ. ಇಲ್ಲಿ

ಕಂಡುಬರುವ ನಿರೂಪಕನಾದ ಬಸಪ್ಪ ಮಾಸ್ತರನು ಹೊರಗಿನ ವ್ಯಕ್ತಿಯಾದರೂ ತಾಂಡದ ಪರಿಸರದೊಳಗೆ ಬೆರೆತುಕೊಂಡು, ಅವರೊಳಗೆ ಒಬ್ಬನಾಗಿ ಇವರ ಸಂವೇದನೆಗಳನ್ನು ಸೆರೆ ಹಿಡಿಯುತ್ತಾನೆ. ಹೀಗಾಗಿ ಆರಂಭಿಕ ಹಂತದ ನಿರೂಪಣೆಯಲ್ಲಿ ಯಾವುದೇ ಅನ್ಯಥಾ ಭಾವಗಳು ಕಂಡುಬರುವುದಿಲ್ಲ. ಹವನ ತಾಂಡದ ಜನತೆಯ ಪ್ರಗತಿಗಾಗಿ ಹೋರಾಟ ಮುಂದುವರಿಸಿದ ಮಾಸ್ತರನು ಇವರ ಭೂಮಿಯ ಕಲಹದಲ್ಲಿ ಶಿಕ್ಷೆಯನ್ನು ಅನುಭವಿಸುತ್ತಾನೆ. ಜಮೀನ್ದಾರರ ಕುತಂತ್ರದಿಂದ ತಾಂಡದ ಮೇಲೆ ನಡೆದ ಹಲ್ಲೆಯಿಂದ ತಾಂಡದ ಬದುಕು ಸಂಪೂರ್ಣವಾಗಿ ಬದಲಾಗುತ್ತದೆ. ಇಲ್ಲಿ ತಾಂಡದ ಪ್ರಮುಖ ವ್ಯಕ್ತಿಯಾದ ಸೋಮಾಲ್ಯನು ಬಲವಾದ ಪೆಟ್ಟುತಿಂದು ಕೃಶವಾಗುತ್ತಾನೆ. ಇದರಿಂದ ಈತನ ಮಗನಾದ ಹರಿಯು ತನ್ನ ತಂದೆಯನ್ನು ನಗರಕ್ಕೆ ಕರೆದುಕೊಂಡು ಹೋಗುತ್ತಾನೆ. ಈ ಕಲಹದಲ್ಲಿ ಭಾಗಿಯಾದ ಆರೋಪದಲ್ಲಿ ಮಾಸ್ತರನು ಬೇರೆ ಕಡೆಗೆ ವರ್ಗಾವಣೆಯಾಗುತ್ತಾರೆ. ಇಲ್ಲಿಂದ ಮುಂದೆ ತಾಂಡಕ್ಕೆ ಸಮರ್ಥವಾದ ನಾಯಕತ್ವದ ಕೊರತೆಯಿಂದಾಗಿ ಇಲ್ಲಿ ಅರಾಜಕತೆಯು ತಲೆದೋರುತ್ತದೆ. ಇದು ಈ ಕಾದಂಬರಿಯ ಮೊದಲ ನಿರೂಪಣಾಕ್ರಮ.

ಮಾಸ್ತರನು ತಾಡದಿಂದ ನಿರ್ಗಮಿಸಿದ ನಂತರ ಇಲ್ಲಿ ನಿರೂಪಕನಾಗಿ ಸೋಮಾಲ್ಯನ ಹಿರಿಯ ಮಗನಾದ ಹರಿಯು ಕಥೆಯನ್ನು ಮುಂದುವರಿಸುತ್ತಾನೆ. ಹರಿಯು ತನ್ನ ತಂದೆ ತಾಯಿಯರನ್ನು ನಗರಕ್ಕೆ ಕರೆದುಕೊಂಡು ಹೋದ ತರುವಾಯದಲ್ಲಿ ಇವರ ಜೀವನದಲ್ಲಿ ಎದುರಾಗುವ ಆಧುನಿಕತೆಯ ಬಿಕ್ಕಟ್ಟನ್ನು ಪರಿಚಯಿಸುತ್ತಾನೆ. ಮಾನವೀಯ ಸಂಬಂಧಗಳಿಗೆ ಬೆಲೆಯಿಲ್ಲದ ನಗರದ ಯಾಂತ್ರಿಕ ಬದುಕಿನ ನಡುವೆ ಇವರು ಅನುಭವಿಸುವ ಯಾತನೆ ಮತ್ತು ಪಾರಂಪರಿಕ ಸಂಸ್ಕೃತಿಯನ್ನು ಕನಿಷ್ಠವೆಂದು ಪರಿಭಾವಿಸುವ ಆಧುನಿಕ ಮನಸುಗಳ ತಲ್ಲಣಗಳನ್ನು ಇಲ್ಲಿ ತಿಳಿಪಡಿಸುತ್ತದೆ.

ಮೂರನೆಯ ಹಂತದಲ್ಲಿ ನಿರೂಪಣಾಕ್ರಮವು ಮತ್ತೇ ಬದಲಾಗುತ್ತದೆ. ಇಲ್ಲಿ ನಿರೂಪಣೆಯನ್ನು ಸೋಮಾಲ್ಯನ ಮಗಳಾಗ ಝೀಮ್ರಿಯು ಮುಂದುವರಿಸುತ್ತಾಳೆ. ಇವಳ ಮೂಲಕ ತಾಂಡದ ಬದಲಾದ ಪರಿಸರವನ್ನು ಅನಾವರಣಗೋಳಿಸುವುದು ಇಲ್ಲಿನ ನಿರೂಪಣಾ ತಂತ್ರಗಳಲ್ಲೊಂದಾಗಿದೆ. ನಂತರದಲ್ಲಿ ಈ ಕಾದಂಬರಿಯ ನಿರೂಪಣೆಯನ್ನು ಸೋಮಾಲ್ಯನ ಆತ್ಮೀಯ ಗೆಳೆಯನಾದ 'ಕಸನು' ಮುಂದುವರೆಸುತ್ತಾನೆ. ಇವನು ಮೂಲಸಂಸ್ಕೃತಿಯನ್ನು ಕಳೆದುಕೊಂಡ ಬಗೆಯನ್ನು, ಇಲ್ಲಿನ ರಾಜಕೀಯ ವ್ಯವಸ್ಥೆಯಿಂದ ಉಂಟಾದ ಅರಾಜಕತೆಯನ್ನು ಪರಿಚಯಿಸುತ್ತಾನೆ. ಇಲ್ಲಿ ಬಂಡವಾಳಶಾಹಿಗಳು ತನ್ನ ಅಟ್ಟಹಾಸವನ್ನು ಮೆರೆದು ತಾಂಡದ ಜೀವನದ ಮೇಲೆ ಉಂಟುಮಾಡಿದ ಪರಿಣಾಮವನ್ನು, ಇಲ್ಲಿ ಬದಲಾದ ಜೀವನದಿಂದ ಮನನೊಂದ ಸೋಮಾಲ್ಯನು ಸಾವಿಗೆ ಶರಣಾದ ಬಗೆಯನ್ನು ಪ್ರಸತ್ತುಪಡಿಸುವುದು ಕಂಡುಬರುತ್ತದೆ.

ಇಲ್ಲಿನ ಕಾದಂಬರಿಯಲ್ಲಿ ನಿರೂಪಣಾಕ್ರಮವು ತನ್ನದೇ ಆದ ವಿಶಿಷ್ಟತೆಯನ್ನು ಒಳಗೊಂಡಿದೆ. ಈ ನಿರೂಪಣೆಯ ಮೂಲಕವಾಗಿಯೇ ಇಲ್ಲಿನ ಶೋಷಣೆಯ ನೆಲೆಗಳನ್ನು ನಿರುಪಿಸುವಾ ಪ್ರಯತ್ನಗಳು ಕಂಡುಬರುತ್ತವೆ. ಕಾದಂಬರಿಕಾರರು ತಮ್ಮ ಬಂಡಾಯದ ತತ್ವಗಳ ಅಡಿಯಲ್ಲಿ ಇಲ್ಲಿನ ಸಮಸ್ಯೆಗಳನ್ನು ಸೃಜನಶೀಲ ನೆಲೆಯಲ್ಲಿ ಅನಾವರಣಗೊಳಿಸುವುದು ಕಂಡುಬರುತ್ತದೆ.

**ಕೊನೆ ಟಿಪ್ಪಣಿ**

೧. ಈ.ಎಸ್. ಸಿದ್ಧಲಿಂಗಯ್ಯ, ಎಂ.ಎಚ್. ಕೃಷ್ಣಯ್ಯ.,ಸಾಲುದೀಪ, ಪು.ಸಂ.೪೮೬

೨. ಶಾಂತರಸ., ಸಣ್ಣಗೌಸಾನಿ, ಪು.ಸಂ.೨೩

೩. ಅದೇ, ಪು.೩೪

೪. ಅದೇ, ಪು.೫೦

೫. ಅದೇ, ಪು.೫೮

೬. ಅದೇ, ಪು.೬೦

೭. ಅದೇ, ಪು.೩೪

೮. ಅದೇ, ಪು.೫೭

೯. ಅದೇ, ಪು.೬೫

೧೦. ಅದೇ, ಪು.೩೪

೧೧. ಅದೇ, ಪು.೧೧೦

೧೨. ಅದೇ, ಪು.೧೧೩

೧೩. ಅದೇ, ಪು.೧೧೭

೧೪. ಅದೇ, ಪು.೧೨೩

೧೫. ಜಂಬಣ್ಣ ಅಮರಚಿಂತ, ಕುರುಮಯ್ಯ ಮತ್ತು ಅಂಕುಶದೊಡ್ಡಿ, ಪು.ಸಂ.೫

೧೬. ಅದೇ, ಪು.೨೧

೧೭. ಅಮರೇಶ ನುಗಡೋಣಿ, ಮಹಂತೇಶ ಮಸ್ಕಿ(ಸಂ)., ಅಮರಚಿಂತ ಅಭಿನಂದನ ಗ್ರಂಥ, ಪು.ಸಂ.೧೬೩

೧೮. ಜಂಬಣ್ಣ ಅಮರಚಿಂತ., ಕುರುಮಯ್ಯ ಮತ್ತು ಅಂಕುಶದೊಡ್ಡಿ, ಪು.ಸಂ.೫೦

೧೯. ಅಮರೇಶ ನುಗಡೋಣಿ, ಮಹಂತೇಶ ಮಸ್ಕಿ(ಸಂ)., ಅಮರಚಿಂತ ಅಭಿನಂದನ ಗ್ರಂಥ, ಪು.ಸಂ.೧೬೪

೨೦. ಜಂಬಣ್ಣ ಅಮರಚಿಂತ., ಕುರುಮಯ್ಯ ಮತ್ತು ಅಂಕುಶದೊಡ್ಡಿ, ಪು.ಸಂ.೧೧೨

೨೧. ಅದೇ, ಪು.೬೧

೨೨. ಅದೇ, ಪು.೮೮

೨೩. ಅದೇ ಪು.೫೯

೨೪. ಅದೇ, ಪು.೭೪

೨೫. ಅಮರೇಶ ನುಗಡೋಣಿ, ಮಹಂತೇಶ ಮಸ್ಕಿ(ಸಂ)., ಅಮರಚಿಂತ ಅಭಿನಂದನ ಗ್ರಂಥ, ಪು.ಸಂ. ೧೬೪

೨೬. ಜಂಬಣ್ಣ ಅಮರಚಿಂತ., ಕುರುಮಯ್ಯ ಮತ್ತು ಅಂಕುಶದೊಡ್ಡಿ, ಪು.ಸಂ.೧೬೪

೨೭. ಅದೇ, ಪು.ಸಂ.೧೪೯

೨೮. ಮಲ್ಲಿಕಾರ್ಜುನ್ ಹಿರೆಮಠ್., ಹವನ, ಪು.ಸಂ.೧೧೦

೨೯. ಅದೇ, ಪು.೮೨

೩೦. ಅದೇ, ಪು.೮೮

೩೧. ಅದೇ, ಪು.೬೭

ಅಧ್ಯಾಯ ಐದು

# ಮೂರು ಕಾದಂಬರಿಗಳ ವೈಶಿಷ್ಟ್ಯಗಳು

೫.೧. ಸಣ್ಣಗೌಡಸಾನಿ ಕಾದಂಬರಿಯ ವೈಶಿಷ್ಟ್ಯಗಳು

೫.೨. ಕುರುಮಯ್ಯ ಮತ್ತು ಅಂಕುಶದೊಡ್ಡಿ ಕಾದಂಬರಿಯ ವೈಶಿಷ್ಟ್ಯಗಳು

೫.೩. ಹವನ ಕಾದಂಬರಿಯ ವೈಶಿಷ್ಟ್ಯಗಳು

ಅಧ್ಯಾಯ ಐದು

# ಮೂರು ಕಾದಂಬರಿಗಳ ವೈಶಿಷ್ಟ್ಯಗಳು

ಭಾರತದಲ್ಲಿ ವರ್ಗ ಅಸಮಾನತೆಯಿಂದ ಹಲವು ಸಮುದಾಯಗಳು ಸಮಾಜದ ಅಂಚಿಗೆ ತಳ್ಳಲ್ಪಟ್ಟಿವೆ. ಇಲ್ಲಿಯ ಜಾತಿವ್ಯವಸ್ಥೆಯು ಈ ಸಮುದಾಯಗಳನ್ನು ತಿರಸ್ಕಾರಕ್ಕೆ ಗುರಿಪಡಿಸಿದೆ. ಊರ ಹೊರಗೆ ಕಾಡು-ಮೇಡುಗಳಲ್ಲಿ ವಾಸ ಮಾಡುವಂತೆ ಮಾಡಿವೆ. ಇಂತಹ ಸಮುದಾಯಗಳ ಸಾಂಸ್ಕೃತಿಕ ಜೀವನ ಸಮಾಜದಲ್ಲಿ ತಿರಸ್ಕಾರಗೊಂಡಿದೆ. ಅಲ್ಲದೆ, ಉನ್ನತವರ್ಗಗಳ ಶೋಷಣೆ, ಸ್ವತಂತ್ರ ಅಸ್ತಿತ್ವವಿಲ್ಲದ ಇವರ ಬದುಕು ಆಧುನಿಕ ಚಹರೆಗೆ ಹೊಂದಿಕೊಳ್ಳಲಾಗದ ಸ್ಥಿತಿಯಲ್ಲಿದೆ. ಮೂಲ ಸಂಸ್ಕೃತಿಯಿಂದ ಮೇಲುಮುಖ ಚಲನೆಗೆ ಬರುವ ಸಲುವಾಗಿ ತೆಗೆದುಕೊಳ್ಳುವ ಕ್ರಮ, ಆರ್ಥಿಕ, ಸಾಮಾಜಿಕ, ರಾಜಕೀಯ, ಧಾರ್ಮಿಕ ವಿಚಾರಗಳ ಸಮಾನ ಚರ್ಚೆಇಲ್ಲವಾಗಿದೆ. ಸ್ವಾತಂತ್ರ್ಯ ಪಡೆಯುವ ಸ್ವಯಿಚ್ಛೆಯ, ಹೈದರಾಬಾದ್-ಕರ್ನಾಟಕದ ಪ್ರದೇಶದ ಪರಿಸರವನ್ನು ಗುರುತಿಸುವುದು ಮುಖ್ಯವಾಗಿದೆ. ಉನ್ನತವರ್ಗಗಳ ಶೋಷಣೆಯ ವ್ಯವಸ್ಥೆಯ ವಿರುದ್ಧ ತಳಸಮುದಾಯದ ಪ್ರತಿರೋಧ, ಬಂಡಾಯದ ಧ್ವನಿ, ಆದರ್ಶತೆ, ಉದಾರತೆ, ವೈಚಾರಿಕ ನಿಲುವುಗಳು ಗುರುತಿಸುವಂತಹದು. ಈ ಮೂರು ಕಾದಂಬರಿಗಳಲ್ಲಿ ಬರುವ ವೈಶಿಷ್ಟ್ಯಪೂರ್ಣ ಮೂಲಾಂಶಗಳು ಈ ಮೂರು ಕಾದಂಬರಿಗಳಲ್ಲಿ ಲೇಖಕರು ಹೇಗೆ ಗ್ರಹಿಸಿದ್ದಾರೆ ಮತ್ತು ಅದರ ಮಹತ್ವವೇನು ಎಂಬುದನ್ನು ಗುರುತಿಸುವುದು ಈ ಅಧ್ಯಯನದ ಆಶಯವಾಗಿದೆ.

## ೫.೧. ಸಣ್ಣಗೌಡಸಾನಿ ಕಾದಂಬರಿಯ ವೈಶಿಷ್ಟ್ಯಗಳು

ನಿಜಾಮಶಾಹಿ ಸಂಸ್ಥಾನ, ಕಪ್ಪುಮಣ್ಣಿನ ನಾಡು, ಕನ್ನಡ ಸಾಹಿತ್ಯಕ್ಕೆ ಮೂಲ ಕುರುಹು ದೊರೆತಂತಹ ನಾಡು ಹೈದರಾಬಾದ್ ಕರ್ನಾಟಕ. ಅಂತಹ ಮಹತ್ವಪೂರ್ಣ ಪ್ರದೇಶದ ರಾಯಚೂರು ಜಿಲ್ಲೆಯವರು ಶಾಂತರಸರು. ಇವರು ಅನುಭಾವಿ ಚಿಂತಕರು. ಸಾಹಿತ್ಯಕ್ಷೇತ್ರಕ್ಕೆ ಸೃಜನಶೀಲ, ಸತ್ವಯುತ ಚಿಂತಕರಾಗಿ ಗುರುತಿಸಿಕೊಂಡವರು. ಈ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡು ಗಜಲ್, ಕಥೆ, ಕಾದಂಬರಿ ಮುಂತಾದ ಪ್ರಕಾರಗಳಲ್ಲಿ ಕೆಲಸ ಮಾಡಿ ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆ ನೀಡಿದವರು. ಅಂತಹ ಚಿಂತಕರ ಮಹತ್ವದ ಕಾದಂಬರಿಯಾದ 'ಸಣ್ಣಗೌಡಸಾನಿ'

ಕೃತಿಯನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡು ಅವರ ಸೃಜನಶೀಲ ನೆಲೆಯ ಕಾದಂಬರಿಯನ್ನು ವಿಶ್ಲೇಷಿಸುವ ಮೂಲಕ ಪ್ರಸ್ತುತಪಡಿಸಿದ ಅಂಶಗಳನ್ನು ಅರಿಯುವ ಅಶಯವನ್ನು ಹೊಂದಿದೆ.

ಸಣ್ಣಗೌಡಸಾನಿ ಕಾದಂಬರಿಯು ತಳಸಮುದಾಯದ ಜಾತಿಗೇರ ವರ್ಗದ ಒಬ್ಬ ಹೆಣ್ಣಿನ ಸುತ್ತ ತಿರುಗಿಸಿಕೊಂಡು ಬರೆದಂತಹ ಕಥೆಯಾಗಿದೆ. ಅದು ಒಂದು ಸಾಮಾಜಿಕ ವ್ಯವಸ್ಥೆಯ ವಾಸ್ತವದ ಸ್ಥಿತಿ, ಸಂಗತಿಯ ಚಿತ್ರಣವನ್ನು ಕಟ್ಟಿಕೊಟ್ಟಿದೆ. ಅಲ್ಲಿ ಸಾಮಾಜಿಕ, ರಾಜಕೀಯ, ಧಾರ್ಮಿಕ, ಆರ್ಥಿಕ ವಿಚಾರಗಳನ್ನು ಚರ್ಚಿಸಿದ ಉತ್ತಮ ಕಾದಂಬರಿಯಾಗಿ ಗುರುತಿಸಿಕೊಂಡಿದೆ.

ಈ ಕಾದಂಬರಿಯು ಹೈದಾರಬಾದ್ ಕರ್ನಾಟಕದ ೧೯೬೦-೧೯೭೦ರ ದಶಕದಲ್ಲಿ ಇಲ್ಲಿನ 'ಫ್ಯೂಡಲ್ ವ್ಯವಸ್ಥೆ' ಪ್ರತಿಷ್ಠೆ, ಹಣವಂತಿಕೆ, ದರ್ಪತನ, ಜೊತೆಗೆ ಹೆಣ್ಣನ್ನು ಭೋಗದ ವಸ್ತುವಾಗಿ, ಅಲ್ಲದೇ ಪ್ರತಿಷ್ಠೆಯ ಸಂಕೇತವಾಗಿ ಗುರುತಿಸಿಕೊಂಡಿದೆ. ಇದು ಈ ಪ್ರದೇಶದಲ್ಲಿ ಕಾಣಬಹುದಾದ ವಾಸ್ತವದ ಸಂಗತಿಯಾಗಿದೆ,

ಈ ಕೃತಿಯಲ್ಲಿ ಲಿಂಗ ಅಸಮಾನತೆ ಕಾಣುತ್ತದೆ. ಹೆಣ್ಣು ಒಂದು ಭೋಗದ ವಸ್ತುವಾಗಿ ಪ್ರತಿರೂಪಿತವಾಗಿದ್ದಾಳೆ. ಅಸ್ತಿತ್ವವಿಲ್ಲದಂತಹ ದುರಂತ ಪರಿಸ್ಥಿತಿ ಹೆಣ್ಣಿಗೆ ಕಾಡುತ್ತಿದೆ. ಇಲ್ಲಿ ಫ್ಯೂಡಲ್‌ಗಳ ಹಾದರತನ ಚಟ, ನೀಚತನಗಳಿಗೆ ಬೆಲೆ ನೀಡಿದ್ದಾರೆಯೇ ಹೊರತು ಹೆಣ್ಣಿನ ವ್ಯಕ್ತಿತ್ವಕ್ಕಲ್ಲ. ಇಲ್ಲಿ ಪುರುಷತ್ವದ ಪ್ರಧಾನತೆಯಲ್ಲಿ ಸಿಲುಕಿಕೊಂಡು ಸಂಕಷ್ಟ ಎದುರಿಸುತ್ತಿರುವ ಸ್ತ್ರೀಯರ ಪರಿಸ್ಥಿತಿಯನ್ನು ಅನಾವರಣಗೊಳಿಸಿದೆ.

ಭಾರತೀಯ ಜಾತಿವ್ಯವಸ್ಥೆಯ ಅಡಿಯಲ್ಲಿ ತಳಸಮುದಾಯಗಳು ಕೆಳಸ್ತರದಲ್ಲಿ ಇಟ್ಟು ಶೋಷಣೆ ಮಾಡುತ್ತದೆ. ಇದನ್ನು ಜಮೀನ್ದಾರಿ ವ್ಯವಸ್ಥೆ ಮುಂದುವರಿಸಿಕೊಂಡು ಬಂದಿದೆ. ಕೀಳು ವೃತ್ತಿ ಮಾಡುವ ಸಲುವಾಗಿ ಇವರನ್ನು ತಿರಸ್ಕಾರ ಮಾಡುತ್ತಿದೆ. ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವ ಹುನ್ನಾರದಿಂದ ಕೆಳವರ್ಗದ ಜಾತಿಗೇರ ಕೀಳುಕುಲದ ಮಾಬು ಜಮೀನ್ದಾರಿ ಸೂಗನಗೌಡನ 'ಖಾಯಂ' ಸೂಳೆಯಾಗಿ ಬಂದವಳು ಅವರ ಅಡುಗೆ ಮತ್ತು ದೇವರಮನೆಯಿಂದ ದೂರವಿಡುವ ಮೂಲಕ ಜಾತಿ ಅಸಮಾನತೆಯನ್ನು ಗುರುತಿಸಿರುವುದು ಕಾಣುತ್ತದೆ.

ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಕಾಲದ ಸ್ಥಿತ್ಯಂತರದಲ್ಲಿ ಸಾಮಾಜಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ ರಂಗದಲ್ಲಿ ಉದ್ಭವಿಸಿದ ಬದಲಾವಣೆಗಳನ್ನು ಇಂತಹ ಸಂದರ್ಭದಲ್ಲಿ ನಲುಗಿದ ಜನಸಾಮಾನ್ಯರ ಬದುಕನ್ನು ಚಿತ್ರಿಸುವ ಮೂಲಕ ಅಂದಿನ ಗ್ರಾಮಾಂತರ ಬದುಕನ್ನು ಈ ಕಾದಂಬರಿ ತೆರೆದಿಡುತ್ತದೆ.

ಹೈದರಾಬಾದ್ ಕರ್ನಾಟಕ ಪ್ರದೇಶದ ರಂಗಕಲೆಯಾದ ಸಣ್ಣಾಟ, ದೊಡ್ಡಾಟ, ಪುರಾಣ, ಪುಣ್ಯಕಥೆ, ತತ್ವಪದ ಸಾಹಿತ್ಯ ಮುಂತಾದವು ಈ ಪ್ರದೇಶದ ಮಹತ್ವಪೂರ್ಣವಾದ ಸಾಹಿತ್ಯ

ಮತ್ತು ಕಲೆಗಳಾಗಿವೆ. ಇಂತಹ ಸಾಹಿತ್ಯವನ್ನು ಈ ಕಾದಂಬರಿಯಲ್ಲಿ ಗುರುತಿಸಿದ್ದಾರೆ. ಕಾಲಾಂತರದಲ್ಲಿ ಈ ಕಲೆಯನ್ನು ನಂಬಿಕೊಂಡು ಬದುಕುವ ಜಾತಿಗೇರ ತಳಸಮುದಾಯವನ್ನು ಚಿತ್ರಿಸಿದ್ದಾರೆ. ಇಂತಹ ಸಾಹಿತ್ಯ ಮತ್ತು ಕಲೆಯನ್ನು ಕರಗತ ಮಾಡಿಕೊಂಡು ಜಾತಿಗೇರರು ಊರೂರೂ ಅಲೆಯುತ್ತಾ ಆಟಗಳ ಪ್ರದರ್ಶನ ನೀಡಿ ಗೇಣುಹೊಟ್ಟೆ ತುಂಬಿಸಿಕೊಳ್ಳುವುದು ಮತ್ತು ಆರ್ಥಿಕ ಸಂಕಷ್ಟವನ್ನು ನಿಭಾಯಿಸುವ ಸಾಧನವಾಗಿ ಬೆಳೆಸಿಕೊಂಡು ಬದುಕುವುದನ್ನು ಈ ಕಾದಂಬರಿಯಲ್ಲಿ ಗುರುತಿಸಲಾಗಿದೆ.

ಈ ಕಾದಂಬರಿಯಲ್ಲಿ ಉತ್ತಮ ಸುಸಂಸ್ಕೃತ ಮಹದೇವಪ್ಪನ ಮಗಳಾಗಿ ಹುಟ್ಟಿದವಳು ಮಾಬು. ಆದರೆ ಅದನ್ನು ಪರಿಗಣಿಸದೆ ತಾಯಿ ಕೀಳುಕುಲದವಳಾಗಿದ್ದರಿಂದ ಮಾಬುವನ್ನು ಅಮಾನುಷವಾಗಿ ಕಾಣುತ್ತಾರೆ. ಇದರ ಹಿಂದೆ ಉನ್ನತ ವರ್ಗದ ಹುನ್ನಾರವಿದೆ. ಏಕೆಂದರೆ ಇದು ಕಾಮುಕತನದ ದೃಷ್ಟಿಯಾಗಿದೆ. ಕೀಳುಕುಲದ ಹೆಣ್ಣನ್ನು ಸಂಭೋಗದ ವಸ್ತುವಾಗಿ ಮಾಡಿಕೊಳ್ಳುವಾಗ ಜಾತಿ ಪ್ರಶ್ನೆಯೇ ಅಡ್ಡಿ ಬರುವುದಿಲ್ಲ. ಆದರೆ ತಮ್ಮನ್ನು ತಿರಸ್ಕರಿಸಿ ಕೀಳುಕುಲದ ಸ್ಥಾನಕ್ಕೆ ತನ್ನ ವ್ಯಕ್ತಿತ್ವವನ್ನು ಹೋಲಿಸಿದಳೆಂಬ ಒಂದು ಸುಳ್ಳಿನ ಮಾತು ಜಾತಿಯ ಪ್ರಶ್ನೆ ಎತ್ತಿದರೆ ಇನ್ನೊಂದು ಸ್ವಾಭಿಮಾನ ಮತ್ತು ಪ್ರತಿಷ್ಠೆಯ ಪ್ರಶ್ನೆಯಾಗಿ ನಿಲ್ಲುತ್ತದೆ. ಅದಕ್ಕಾಗಿ ಕ್ರೌರ್ಯತ್ವ ಮೆರೆಯುವಂತಹದನ್ನು ಈ ಕೃತಿಯಲ್ಲಿ ಲೇಖಕರು ಗುರುತಿಸಿದ್ದಾರೆ.

ಸೂಗನಗೌಡನ ಖಾಯಂ ಸೂಳೆಯಾಗಿ ಬಂದ ಮಾಬು ಅಸ್ತಿತ್ವವಿಲ್ಲದವಳು. ಆದರೆ ಪಾರ್ವತಿ ಅಸ್ತಿತ್ವವಿದ್ದರೂ ಸ್ವತಂತ್ರವಿಲ್ಲದವಳು. ಅದಕ್ಕಾಗಿ ಇಲ್ಲಿ ಗರತಿ ಮತ್ತು ಸೂಳೆ ಸ್ಥಾನಗಳು ಎರಡೂ ಒಂದೇ ಆಗಿವೆ. ಇವು ಪುರುಷಪ್ರಾಧಾನ್ಯತೆಯ ಅಧೀನದಲ್ಲಿ ಬದುಕು ಸಾಗಿಸುವ ಹೆಣ್ಣಿನ ವೇದನೆಯಾಗಿದೆ. ಅದಕ್ಕಾಗಿ ಕಿತ್ತಾಡದೆ ಅರಿತು ಅಕ್ಕ ತಂಗಿಯರಾಗಿ ಬಾಳುತ್ತಾರೆ. ಹಾಗೆಯೇ ಮರಿಯಮ್ಮ ತನ್ನ ಗಂಡನಿಂದ ತೊಂದರೆಯಾಗುವ ಸೂಚನೆ ಕಂಡಾಗ ಎಚ್ಚರ ಇರುವಂತೆ ಹೇಳುತ್ತಾಳೆ. ಇವರೆಲ್ಲರ ನಿಲುವು ಪುರುಷಪ್ರಾಧಾನ್ಯತೆಗೆ ವಿರೋಧವಿದೆ. ಆದರೆ ಅದನ್ನು ಬದಲಾಯಿಸಲು ಸಾಧ್ಯವಾಗುವುದಿಲ್ಲ. ಕಾರಣ ಹೆಣ್ಣು-ಹೆಣ್ಣನ್ನು ಅರ್ಥ ಮಾಡಿಕೊಂಡು ಬದುಕುವ ಹೃದಯ ವೈಶಾಲ್ಯತೆಯನ್ನು ಮೆರೆದಿದೆ.

ಭಾರತೀಯ ವರ್ಗವ್ಯವಸ್ಥೆಯು ತಳಸಮುದಾಯವನ್ನು ಕೆಳಸ್ತರದಲ್ಲಿ ಇಟ್ಟಿದೆ. ಇದು ಉನ್ನತವರ್ಗದವರ ಕುಯುಕ್ತಿಯಾಗಿದೆ. ಏಕೆಂದರೆ ತಮ್ಮ ಅಸ್ತಿತ್ವವನ್ನು ಕಾಪಾಡಿಕೊಳ್ಳುವ ಸಲುವಾಗಿ ತಮ್ಮ ಅಧೀನತೆಯಲ್ಲಿ ಬದುಕುವಂತೆ ಮಾಡಿದೆ. ಅದಕ್ಕಾಗಿ ಕೀಳುವೃತ್ತಿಯನ್ನು ಮಾಡುತ್ತಾ ಹೊಲಮನೆಗಳಲ್ಲಿ ಶ್ರಮದಿಂದ ದುಡಿಯುವ ವರ್ಗವಾಗಿದೆ. ಹಾಗೆಯೇ ಈ ತಳವರ್ಗದ ಹೆಣ್ಣು ಉನ್ನತವರ್ಗದ ಕಾಮುಕತನದ ಚಟಕ್ಕೆ ಭೋಗದ ವಸ್ತುವಾಗಿದ್ದಾಳೆ. ಇವಳನ್ನು ಸೂಳೆ, ಖಾಯಂ ಸೂಳೆಯಾಗಿ ಮಾಡುವ ಮೂಲಕ ಅವಳಿಗೆ ಅಸ್ತಿತ್ವವಿಲ್ಲದಂತೆ ಮಾಡಿ ಪ್ರಾಣಿಗಳಂತೆ

ಕೊಂಡುಕೊಳ್ಳುವಂತಹದನ್ನು ಕಾಣುತ್ತೇವೆ. ಅವಳು ಮೂಕಪ್ರೇಕ್ಷಕಳಾಗಿದ್ದಾಳೆ. ಅವಳ ಸಂವೇದನೆಗಳಿಗೆ ಬೆಲೆಯಿಲ್ಲದೆ ಪುರುಷಪ್ರಾಧಾನ್ಯತೆ ಮೆರೆದಿದೆ ಮತ್ತು ಉನ್ನತವರ್ಗಗಳು ತಳವರ್ಗಗಳ ಮೇಲೆ ದರ್ಪ, ದಬ್ಬಾಳಿಕೆ ಮಾಡುವ ಮೂಲಕ, ಶೋಷಣೆ ನಿರಂತರತೆಯನ್ನು ಗುರುತಿಸುತ್ತದೆ.

ಹೈದರಾಬಾದ್ ಕರ್ನಾಟಕದಲ್ಲಿ ಜಮೀನ್ದಾರಿ ವ್ಯವಸ್ಥೆ ಹೆಚ್ಚಾಗಿರುವುದು ಕಂಡುಬರುತ್ತದೆ. ಹೊಲ, ಮನೆ ಸಂಪತ್ತು ಅಧಿಕಾರದ ಸಲುವಾಗಿ ಅನೇಕ ಜಗಳಗಳಾಗಿ ಕೋರ್ಟು, ಕಛೇರಿ ಅಲೆದು ದಾಯಾದಿಗಳ ಹಗೆತನ, ಕ್ರೌರ್ಯ, ದ್ವೇಷ ಮೆರೆಯುವಂತಹದ್ದನ್ನು ಕಾಣುತ್ತೇವೆ. ಇದರಿಂದಾಗಿ ಊರಿನ ನೆಮ್ಮದಿ, ಜನಸಾಮಾನ್ಯರ ಬದುಕು ಅಸ್ತವ್ಯಸ್ತವಾಗುತ್ತಿದೆ. ತಳವರ್ಗವನ್ನು ಸಂದರ್ಭೋಚಿತವಾಗಿ ಬಳಸಿಕೊಂಡು ಅವರ ಜೀವನವನ್ನು ಅತಂತ್ರತೆಯ ಎಡೆಗೆ ನೂಕುತ್ತಿರುವುದು ಕಾದಂಬರಿಯಲ್ಲಿ ನಿರೂಪಿತವಾಗಿದೆ.

ಈ ಪ್ರದೇಶವು ಅನೇಕ ರಾಜಮನೆತನಗಳು ಮತ್ತು ನಿಜಾಮಶಾಹಿ ಆಡಳಿತದ ಪ್ರಭಾವವಿದ್ದುದರಿಂದ ಸಾಮಾಜಿಕ, ಆರ್ಥಿಕ, ಧಾರ್ಮಿಕವಾಗಿ ಹಿಂದುಳಿಯುವುದಕ್ಕೆ ಕಾರಣವಾಗಿದೆ. ತದನಂತರ ಜಮೀನ್ದಾರಿ ವ್ಯವಸ್ಥೆ ಪ್ರಾರಂಭವಾದ ಮೇಲೆ, ಜನಸಾಮಾನ್ಯರ ಆದಿಮ ಕೀಳು ಕುಲಗಳು, ಅಲೆಮಾರಿ ತಳಸಮುದಾಯದ ಬದುಕು ಅತಂತ್ರವಾಯಿತು. ಉನ್ನತವರ್ಗಗಳ ಶೋಷಣೆಯ ನಿರಂತರತೆ ಈ ಕಾದಂಬರಿಯಲ್ಲಿ ಅನಾವರಣಗೊಂಡಿದೆ.

ಈ ಕಾದಂಬರಿಯಲ್ಲಿ ಲೇಖಕರು ಹೆಣ್ಣಿನಲ್ಲಿರುವ ಹೊಂದಾಣಿಕೆ–ಮನೋಭಾವನೆ, ಹೃದಯವಂತಿಕೆ, ತಾಯ್ತನ, ಆದರ್ಶತೆ, ಉದಾರತೆ, ಪ್ರಗತಿಪರತೆ, ಮಾನವೀಯತೆ ಅಂಶಗಳನ್ನೊಳಗೊಂಡ ಹೆಣ್ಣಿನ ಅಸ್ಮಿತೆಯನ್ನು ಗುರುತಿಸುತ್ತಾರೆ ನಿಜ! ಆದರೆ ಈ ವ್ಯವಸ್ಥೆಯಲ್ಲಿ ಮಾನ್ಯತೆ ಸಿಗುವಂತೆ ಮಾಡಲು ನಿಷ್ಫಲವಾಗಿದೆ. ಪುರುಷತ್ವ ಅಧೀನತೆಯಲ್ಲಿ ಅವಳು ದರ್ಪ, ದೌರ್ಜನ್ಯಗಳಿಂದ ನಲುಗಿದ್ದಾಳೆ ಹಾಗೂ ನೋವು, ಆಕ್ರಂದನ ಇವೆಲ್ಲ ಅವಳನ್ನು ಗಾಸಿಗೊಳಿಸಿ ದಾಸ್ಯಕ್ಕೆ ನೂಕುವ ಕುಯುಕ್ತಿ ಹುನ್ನಾರಗಳಿಗೆ ಬಲಿಯಾಗಿರುವ ಹೆಣ್ಣಿನ ಸ್ಥಿತಿಯನ್ನು ಇಲ್ಲಿ ಗುರುತಿಸುತ್ತದೆ.

ಈ ಪ್ರದೇಶದಲ್ಲಿನ ಶ್ರೀಮಂತರ ಮಕ್ಕಳು ಹೆಚ್ಚಾಗಿ ಅರ್ಧಕ್ಕೆ ಶಾಲೆ ಬಿಡುವಂತಹದು ಕಂಡುಬರುತ್ತದೆ. ಕಾರಣ ಅತಿ ಹೆಚ್ಚು ಶ್ರೀಮಂತರು ಭೂ ಒಡೆಯರಾಗಿರುವುದರಿಂದ ಹಣದ ದರ್ಪ ಆಗಿರಬಹುದು. ಅಥವಾ ಸರಕಾರಿ ನೌಕರಿ ಇವರಿಗೆ ಅಪಹಾಸ್ಯವಾಗಿದೆ ಎಂದೆನಿಸುತ್ತದೆ. ಅವರು ಕಲಿತರೂ ವಕೀಲರಾಗಬೇಕು ಎಂದು ಬಯಸುವರು. ಕಾರಣ ಜಗಳಗಳಾದಾಗ ಉಪಯೋಗಕ್ಕೆ ಬರುತ್ತದೆ ಎಂಬ ಅಭಿಪ್ರಾಯವಿದೆ. ಇನ್ನು ಜನಸಾಮಾನ್ಯರು ಇವರ ಅಧೀನರು. ಇವರಿಗೆ ಶಿಕ್ಷಣ 'ಗಗನಕುಸುಮ'ವಾಗಿದೆ. ಅದಕ್ಕಾಗಿ ಈ ಪ್ರದೇಶ ಮತ್ತು ಇಲ್ಲಿನ ಜನಜೀವನ ಹಿಂದುಳಿದಿರುವುದಕ್ಕೆ ಮುಖ್ಯಕಾರಣವಾಗಿದೆ ಎಂದೆನಿಸುತ್ತದೆ.

ಈ ಕಾದಂಬರಿಯಲ್ಲಿ ಜಾತಿಗೇರ ಸಮುದಾಯ ಸಣ್ಣಾಟ ಕೊಡುವುದರಿಂದಲೇ ಹಲಗೆ ನಾದದದೊಂದಿಗೆ ಪ್ರಾರಂಭವಾಗುತ್ತದೆ. ಇದು ಅವರ ಜೀವನ ಹೋರಾಟದ ಸಂಕೇತವಾಗಿದೆ. ಈ ವ್ಯವಸ್ಥೆಯಲ್ಲಿ ತಳಸಮುದಾಯ ನಿರಂತರ ಶೋಷಣೆಯ ಕ್ರಮವನ್ನು ಸೂಚಿಸುತ್ತದೆ. ಈ ಸಮುದಾಯದ ಪ್ರತಿರೋಧ ಮತ್ತು ಬಂಡಾಯದ ಧ್ವನಿಗಳು ಎತ್ತಿದರೂ ಸನಾತನವಾದಿ ಮತ್ತು ಉನ್ನತವರ್ಗಗಳ ಕುಯುಕ್ತಿಯಿಂದ ನಿಷ್ಫಲವಾಗಿ ಕಾಲಾಂತರದಿಂದ ಶೋಷಣೆ ಮುಂದುವರಿಯುತ್ತಿದೆ. ಅದನ್ನು ಜಾತಿಗೇರ ಆಟ ಕೊಟ್ಟರ ಎಂಬ ಹಲಗೆಯ ನಾದದೊಂದಿಗೆ ಕಾದಂಬರಿಯನ್ನು ಮುಕ್ತಾಯಗೊಳಿಸಿ ಇದರ ಮೂಲಕ ನಿರಂತರ ಶೋಷಣೆ ಕ್ರಮವನ್ನು ಲೇಖಕರು ಗುರುತಿಸುವುದು ಇಲ್ಲಿ ಕಾಣುತ್ತದೆ.

### ೫.೨. ಕುರುಮಯ್ಯ ಮತ್ತು ಅಂಕುಶದೊಡ್ಡಿಯ ವೈಶಿಷ್ಟ್ಯಗಳು

ಈ ಕಾದಂಬರಿಯ ರಚನಾಕಾರು ಜಂಬಣ್ಣ ಅಮರಚಿಂತರು. ಇವರು ದೋ-ಅಬ್ ಪ್ರದೇಶ, ಎಡೆದೊರೆಯ ನಾಡು ಎಂದು ಕರೆಯುವ ಹೈದರಾಬಾದ್ ಕರ್ನಾಟಕದ ರಾಯಚೂರು ಜಿಲ್ಲೆಯವರಾಗಿದ್ದಾರೆ. ಇವರು ದಲಿತರಲ್ಲದೇ ದಲಿತ-ಬಂಡಾಯದ ಹೋರಾಟಗಾರರಾಗಿದ್ದರು ಹಾಗೂ ಬಂಡಾಯ ಸಾಹಿತ್ಯದ ಬೆಳವಣಿಗೆಗೆ ಶ್ರಮಿಸಿದವರು. ನಡೆನುಡಿ ಒಂದಾದ ಅನುಭವದ ಸಾಹಿತ್ಯ ಕಲೆಯನ್ನು ರೂಪಿಸಿಕೊಂಡವರು. ವೈಚಾರಿಕತೆ, ಆದರ್ಶತನ, ಪ್ರಗತಿಪರ ಚಿಂತನೆಗಳನ್ನು ಮೈಗೂಡಿಸಿಕೊಂಡವರು ಹಾಗೂ ತ್ರಿಭಾಷೀಕರಣದ ಪ್ರಭಾವವಿದ್ದರೂ ಪ್ರಾದೇಶಿಕ ಭಾಷೆಯನ್ನೇ ಬರವಣಿಗೆಯಲ್ಲಿ ಬಳಸಿದ್ದಾರೆ.

ಹೈದರಾಬಾದ್ ಕರ್ನಾಟಕದಲ್ಲಿ ಇವರು ಉತ್ತಮ ಕಥನ ಕಾದಂಬರಿಕಾರರಾಗಿ ಗುರುತಿಸಿಕೊಂಡಿದ್ದಾರೆ. ಇವರ ಕೃತಿಗಳು ಈ ಪ್ರದೇಶದ ವಾಸ್ತವ ಚಿತ್ರಣದಿಂದ ಕೂಡಿವೆ. ಜನಸಾಮಾನ್ಯರ ನೋವು-ನಲಿವಿನ ಸಂವೇದನೆಗಳನ್ನು ಹತ್ತಿರದಿಂದ ನೋಡಿ ಕೆಲವನ್ನು ಸ್ವತಃ ಅನುಭವಿಸಿ ಅನೇಕ ಸಾಹಿತ್ಯ ಕೃತಿಗಳನ್ನು ರಚನೆ ಮಾಡಿದ್ದಾರೆ. ಅಂತಹ ಉತ್ತಮ ವ್ಯಕ್ತಿತ್ವವುಳ್ಳ ಕಾದಂಬರಿಕಾರರು ರಚಿಸಿದ 'ಕುರುಮಯ್ಯ ಮತ್ತು ಅಂಕುಶದೊಡ್ಡಿ' ಕಾದಂಬರಿಯನ್ನು ನನ್ನ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಕುರುಮಯ್ಯ ಮತ್ತು ಅಂಕುಶದೊಡ್ಡಿ ಕಾದಂಬರಿಯು ತಳಸಮುದಾಯದ ಒಟ್ಟು ಸಂವೇದನೆಯನ್ನು ಕೊರವ ಜನಾಂಗದ ಸಾಂಸ್ಕೃತಿಕ ಜೀವನದೊಂದಿಗೆ ಸಮೀಕರಿಸಿ, ಅದರ ಮೂಲ ಆಚಾರ-ವಿಚಾರ, ಸಂಪ್ರದಾಯ, ಮೂಢನಂಬಿಕೆ, ಅನಿಷ್ಟಪದ್ಧತಿ, ನೀತಿಸಂಹಿತೆಗಳನ್ನು ಚಿತ್ರಿಸಿ ಪ್ರಸ್ತುತ ಕೊರವ ಸಮುದಾಯಕ್ಕೆ ಸವಾಲು ಒಡ್ಡಿ ಎಚ್ಚರಿಸುವ ಕಾರ್ಯವನ್ನು ಈ ಕೃತಿ ಮಾಡುತ್ತದೆ.

ಕುರುಮಯ್ಯ ಮತ್ತು ಅಂಕುಶದೊಡ್ಡಿ ಕಾದಂಬರಿ ಏದು ಬೇಟೆಯಿಂದ ಪ್ರಾರಂಭವಾಗಿದೆ. ಏದು ಬೇಟೆಯು ಕೊರವರ ಜನಾಂಗದ ಶೋಷಣೆ ಸಂಕೇತವಾಗಿ ಇಡೀ ಕಾದಂಬರಿಯ ತುಂಬೆಲ್ಲ ಹರಡಿಕೊಂಡಿದೆ. ಬಂಡವಾಳಶಾಹಿ ಕುಶಾಲಪ್ಪ ಬೇಟೆಗಾರನಾಗಿ ಕೊರವ ಜನಾಂಗವನ್ನು ಬೇಟೆಯಾಡುವ ಮೂಕಪ್ರಾಣಿಗಳಂತೆ ಮಾಡಿಕೊಂಡಿದ್ದಾನೆ. ಇದು ಶೋಷಣೆಯನ್ನು ಗುರುತಿಸುವ ಮಹತ್ವದ ಕೃತಿಯಾಗಿದೆ.

ಭಾರತೀಯ ಜಾತಿವ್ಯವಸ್ಥೆಯಲ್ಲಿ ಕೊರವ ಜಾತಿಯು ತೀರ ಹಿಂದುಳಿದ ವರ್ಗಕ್ಕೆ ಸೇರಿದೆ. ಈ ಕಾದಂಬರಿಯಲ್ಲಿ ಕ್ಷಯ ರೋಗದಿಂದ ಬಳಲುವ ಮಾರಪ್ಪ ಹಸಿವು ತಾಳದೆ ತನಗಿಂತ ಕೀಳು ಜಾತಿಯವರಾದ ಹೊಲೆಯ-ಮಾದಿಗರಲ್ಲಿ ಬೇಡಿ ತಿಂದದ್ದು, ಕೊರವ ಜಾತಿಗೆ ಪ್ರತಿಷ್ಠೆಯ ಪ್ರಶ್ನೆಯಾಗಿ ಕಾಡಿದೆ. ಸಮಾಜದಲ್ಲಿ ಶೋಷಣೆಗೆ ಒಳಗಾದ ಜಾತಿಯೇ, ಮತ್ತೊಂದು ಜಾತಿಯನ್ನು ಶೋಷಣೆಗೆ ಒಳಪಡಿಸಿರುವುದನ್ನು ಗುರುತಿಸುತ್ತದೆ.

ಈ ಕಾದಂಬರಿಯಲ್ಲಿ ಲಿಂಗಶೋಷಣೆ ಕಂಡುಬರುತ್ತದೆ. ಈ ಜಗತ್ತಿನ ಎಲ್ಲೆಡೆ ಬಹುತೇಕರು ಹೆಣ್ಣನ್ನು ದ್ವಿತೀಯ ದರ್ಜೆಯವಳಾಗಿ ಕಾಣುತ್ತಾರೆ. ಹಾಗೆಯೇ ಕಾದಂಬರಿಯಲ್ಲಿ ಚಿತ್ರಿತವಾಗಿರುವ ಹೆಣ್ಣು ಕೂಡ ವ್ಯಕ್ತಿತ್ವವಿಲ್ಲದ ಒಂದು ಮಾರಾಟದ ವಸ್ತುವಾಗಿ ರೂಪಿತಳಾಗಿದ್ದಾಳೆ. ತಮಗೆ ಬೇಕಾದಾಗ ಖರೀದಿಸುವ ಬೇಡವಾದಾಗ ಮಾರಾಟ ಮಾಡುವ ಭೋಗದ ವಸ್ತುವಾಗಿದ್ದಾಳೆ ಎಂಬುದನ್ನು ಈ ಸಂಕಥನದಲ್ಲಿ ಗ್ರಹಿಸಲಾಗಿದೆ.

ಭಾರತೀಯ ಪುರೋಹಿತಶಾಹಿ ವ್ಯವಸ್ಥೆಯ ಸಂಹಿತೆಯ ಪ್ರಕಾರ ಸಮಾಜದ ಕೆಳಸ್ತರದಲ್ಲಿರುವ ಜಾತಿಗಳಾದ ಹೊಲೆಯ, ಮಾದಿಗ, ಕೊರವ ಜನಾಂಗಗಳನ್ನು ಪವಿತ್ರ ಸ್ಥಳವಾದ ದೇವಾಲಯದಿಂದ ತಿರಸ್ಕಾರ ಮಾಡಲಾಗಿದೆ. ಪ್ರಸ್ತುತ ಕಾದಂಬರಿಯಲ್ಲಿ ಪ್ರಕೃತಿ ವಿಕೋಪದಿಂದ ನಿರಾಶ್ರಿತರಾದ ಕೊರವರು ಗುಡಿ ಪ್ರವೇಶಿಸಿದ್ದರಿಂದ ಮೇಲುವರ್ಗದವರ ಕೆಂಗಣ್ಣಿಗೆ ಗುರಿಯಾಗಿ ಅಸಮಾನತೆಯ ನೋವನ್ನು ಅನುಭವಿಸುತ್ತಿದ್ದಾರೆ.

ಈ ಕಾದಂಬರಿಯಲ್ಲಿ ಸನಾತನವಾದಿ ಮನೋಧರ್ಮದ ಜಾತಿಶೋಷಣೆಯಿಂದ ವಿಮುಕ್ತಿ ಹೊಂದಲು, ಸಾಮಾಜಿಕ ಸಮಾನತೆ ಮತ್ತು ಆರ್ಥಿಕ ಸಬಲತೆಯನ್ನು ಹೊಂದಿ ಸ್ವತಂತ್ರ ಜೀವನ ಪಡೆಯುವುದಕ್ಕಾಗಿ ಮತಾಂತರವೆಂಬ ಮಾರ್ಗಕ್ಕೆ ಮುಂದಾಗಿರುವುದನ್ನು ಲೇಖಕರು ಈ ಕಾದಂಬರಿಯ ಒಡಲಿನಲ್ಲಿ ಅನಾವರಣಗೊಳಿಸಿದ್ದಾರೆ.

ಕೊರವರು ತಳಸಮುದಾಯದವರಾಗಿದ್ದು, ಮೇಲುವರ್ಗದ ದಬ್ಬಾಳಿಕೆ ಮತ್ತು ನಿರ್ಬಂಧಕ್ಕೆ ಒಳಗಾಗಿದ್ದಾರೆ. ಅದಕ್ಕಾಗಿ ಇವರು ನಿಕೃಷ್ಟ ವೃತ್ತಿಯಾದ ಹಂದಿ ಸಾಕಾಣಿಕೆ, ಗುಡಿಕೈಗಾರಿಕೆ ಮಾಡಿ ಆರ್ಥಿಕ ಸಂಕಷ್ಟ ಎದುರಿಸುತ್ತಾರೆ. ಇದರಿಂದಾಗಿ ಒಂದು ಹೊತ್ತಿನ ಗಂಜಿ ಕಾಣದೆ ಭಿಕ್ಷೆ ಬೇಡುವ

ಶೋಚನೀಯ ಸ್ಥಿತಿಯಿಂದ ಮುಕ್ತಿ ಹೊಂದಲು ಲೇಖಕರು "ವೃತ್ತಿಪಲ್ಲಟ" ಮಾಡುವ ಮೂಲಕ ಪ್ರಗತಿಪರತೆಯನ್ನು ಮೆರೆದಿರುವುದು ಈ ಕಾದಂಬರಿಯಲ್ಲಿ ಚಿತ್ರಣಗೊಂಡಿದೆ.

ಕೊರವ ತಳಸಮುದಾಯ ಸಮಾಜದ ಅಂಚಿನಲ್ಲಿದ್ದು ಅದು ಆಧುನಿಕತೆಯ ಚಹರೆ ಅರಿಯದೆ ಹೋಗಿದೆ. ಹಾಗಾಗಿ ಬಂಡವಾಳಶಾಹಿ ವ್ಯವಸ್ಥೆಯ ಶೋಷಣೆಯನ್ನು ಎದುರಿಸದೆ ಇರುವುದಕ್ಕೆ ಇವರ ಸಮುದಾಯದಲ್ಲಿರುವ ಮೂಢನಂಬಿಕೆ, ಅನಿಷ್ಟಪದ್ಧತಿ ಅನುಸರಿಸುವುದಾಗಿದೆ. ಅಲ್ಲದೇ ನೀತಿಸಂಹಿತೆಯ ಬಿಕ್ಕಟ್ಟು ಬಿಡಿಸಿಕೊಳ್ಳಲಾಗದಿರಲು ಮೂಢನಂಬಿಕೆ ಕಾರಣವಾಗಿದೆ. ಅದಕ್ಕಾಗಿ ಅಕ್ಷರವಂತರಾಗಬೇಕು ಎನ್ನುವಂತಹದ್ದನ್ನು ಈ ಕೃತಿ ತಿಳಿಸುತ್ತದೆ.

ಕಾದಂಬರಿಯಲ್ಲಿ ಚಿತ್ರಗೊಂಡ ಬೆಟ್ಟ, ಗುಡ್ಡ, ಮಳೆ, ಝರಿ, ಭಾವಿ, ಕೋಳಿ, ಹಂದಿ, ನಾಯಿ, ಬೆಕ್ಕು, ಬೇಟೆ, ಬಿಜಿಲಿ(ಪೆಟ್ರೋಮ್ಯಾಕ್ಸ್) ಮುಂತಾದವು ಶೋಷಣೆ ಮತ್ತು ಹೋರಾಟದ ಪ್ರತೀಕಗಳಾಗಿವೆ. ಅಲ್ಲದೇ ಜೀವನದ ದಟ್ಟ ಅನುಭವ ಕಟ್ಟಿಕೊಡುವ ಪೋಷಕ ಪಾತ್ರಗಳಾಗಿ ನಿಂತಿರುವುದನ್ನು ಈ ಕಾದಂಬರಿಯ ಒಡಲಿನಿಂದ ಅರಿಯಲಾಗುತ್ತದೆ.

ಕೊರವ ಸಮುದಾಯ ಎಷ್ಟು ಸ್ವತಂತ್ರ ಬದುಕು ಕಟ್ಟಿಕೊಳ್ಳಲು ಪ್ರಯತ್ನಿಸಿದರೂ ಈ ಸಾಮಾಜಿಕ ವ್ಯವಸ್ಥೆ, ಪ್ರಕೃತಿವಿಕೋಪ, ಬಂಡವಾಳ ಕುತಂತ್ರಗಳು ಇವರನ್ನು ಇನ್ನೂ ದಾಸ್ಯಕ್ಕೆ ದೂಡಿವೆ. ಆದರೂ ಎಲ್ಲವನ್ನು ಮರೆತು ಪುನಃ ಸಮಾಜಕ್ಕೆ ಬೆಳಕು ನೀಡಿ ಅಂದತ್ವದಲ್ಲಿ ಬದುಕು ಸಾಗಿಸುವಂತೆ ಮಾಡಿದೆ. ಬಿಜಿಲಿ ಹೊರುವ ಮೂಲಕ ಶೋಷಣೆ ಮುಂದುವರಿದಿದೆ ಎಂದು ಈ ಕಾದಂಬರಿ ಸಾರುತ್ತದೆ.

**೫.೩. ಹವನ ಕಾದಂಬರಿಯ ವೈಶಿಷ್ಟ್ಯಗಳು**

ಹೈದರಾಬಾದ್ ಕರ್ನಾಟಕ ಕನ್ನಡ ಸಾಹಿತ್ಯದ ಮೊದಲ ಕುರುಹು 'ಕವಿರಾಜಮಾರ್ಗ' ದೊರೆತಂತಹ ನಾಡು ಅಲ್ಲದೇ ವಚನ, ತತ್ವಪದ, ಗಜಲ್, ಸಾಹಿತ್ಯಗಳ ನೆಲೆವೀಡಾಗಿದೆ. ಇಂತಹ ಮಹತ್ವಪೂರ್ಣ ಪ್ರದೇಶದಲ್ಲಿನ ರಾಯಚೂರು ಜಿಲ್ಲೆಯವರಾದ ಶ್ರೀಮಾನ್ ಹೀರೆಮಠ ಅವರು ಪ್ರಮುಖ ಕಥೆ, ಕಾದಂಬರಿಕಾರರಾಗಿ ಸಾಹಿತ್ಯಲೋಕಕ್ಕೆ ತಮ್ಮದೇ ಆದ ಕೊಡುಗೆ ನೀಡಿದ ಮಹತ್ವಪೂರ್ಣ ಬರಹಗಾರರಾಗಿದ್ದಾರೆ. ಇಂತಹ ಕಾದಂಬರಿಕಾರ ಕೃತಿಯಾದ 'ಹವನ' ಒಂದು ಲಂಬಾಣಿ ತಳಸಮುದಾಯದ ಜನಾಂಗೀಯ ಅಧ್ಯಯನದ ಕಾದಂಬರಿಯಾಗಿದೆ. ಇದನ್ನು ಸೃಜನಶೀಲ ಸಾಹಿತ್ಯಲೋಕಕ್ಕೆ ಪರಿಚಯಿಸುವ ಮೂಲಕ ಮೂಲಾಂಶಗಳನ್ನು ಗುರುತಿಸುವ ಆಶಯವಾಗಿದೆ. ಅದನ್ನು ಈ ಕೆಳಗಿನಂತೆ ಗುರುತಿಸಲಾಗಿದೆ.

ಈ ಕಾದಂಬರಿ ತಳಸಮುದಾಯವಾದ ಅಲೆಮಾರಿ ಬುಡಕಟ್ಟು ಲಂಬಾಣಿ ಜನಾಂಗದ ಸಾಂಸ್ಕೃತಿಕ ಜೀವನ ಅನಾವರಣದೊಂದಿಗೆ, ಹೈದರಾಬಾದ್ ಕರ್ನಾಟಕದ ಜನಸಾಮಾನ್ಯರ

ಬದುಕು, ಬವಣೆ, ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ, ಅಂಶಗಳ ಚಿತ್ರಣ ಈ ಕಾದಂಬರಿಯಲ್ಲಿ ಅನಾವರಣಗೊಂಡಿದೆ.

ಲಂಬಾಣಿ ತಳಸಮುದಾಯ ಸಮಾಜದ ಅಂಚಿನಲ್ಲಿ ಬದುಕುವಂತಹದಾಗಿದೆ. ಅಲ್ಲದೇ ಕಾಡು-ಕಾಡಿನ ಸಂಪತ್ತು ಬಳಸಿಕೊಂಡು ಎಲೆಮರೆಯ ಕಾಯಿಯಂತೆ ಬದುಕುವಂತಹ ಜನಾಂಗವಾಗಿದೆ. ಅದಕ್ಕಾಗಿ ಲೇಖಕರು ಇಂತಹ ಜನಾಂಗದ ಬದುಕು, ಬವಣೆ ಸಾಂಸ್ಕೃತಿಜೀವನ, ಸೃಜನಶೀಲ ಕಲೆಯಲ್ಲಿ ಚಿತ್ರಿಸಿ ಸಮಾಜಕ್ಕೆ ಪರಿಚಯಿಸಿದ ಶ್ರೇಷ್ಠತೆಯು ಈ ಕಾದಂಬರಿಯ ಲೇಖಕರಿಗೆ ಸಲ್ಲುತ್ತದೆ.

ತಳಸಮುದಾಯವಾದ ಲಂಬಾಣಿ ಜನಾಂಗವು ಪ್ರಕೃತಿಯ ಮಡಿಲೊಳಗೆ ವಿಶಿಷ್ಟ ಸಂಸ್ಕೃತಿ ಸಂಪ್ರದಾಯ, ಆಚಾರ-ವಿಚಾರ ಧಾರ್ಮಿಕ ವಿಧಿವಿಧಾನ, ಧಾರ್ಮಿಕ ನಾಯಕರು, ದೈವ, ಮದುವೆ ಸಂಪ್ರದಾಯಗಳು ಉಡುಗೆತೊಡುಗೆ, ಅಂಧಶ್ರದ್ಧೆಗಳನ್ನು ಒಳಗೊಂಡಿವೆ. ಅವರದೆಯಾದ ನೀತಿಸಂಹಿತೆಯ ಕಟ್ಟಳೆಯೊಳಗೆ ಬದುಕುವಂತಹ ತಳಸಮುದಾಯವಾಗಿದೆ. ಅದಕ್ಕಾಗಿ ಸಾಮಾಜಿಕ ವ್ಯವಸ್ಥೆಯಲ್ಲಿ ಭಿನ್ನವಾಗಿ ಪ್ರತಿರೂಪಿತವಾಗಿರುವುದು ನಮಗೆ ತೊರುತ್ತದೆ.

ಈ ಜನಾಂಗ ಸಮಾಜದ ಅಂಚಿನ ಪ್ರಕೃತಿಯ ಮಡಿಲೊಳಗೆ ನೆಲಸಿದಂತಹ ತಳಸಮುದಾಯವಾಗಿದೆ. ಅದಕ್ಕಾಗಿ ಉನ್ನತವರ್ಗಗಳು ಕೆಳಹಂತದಲ್ಲಿಟ್ಟಿವೆ. ಇವರ ಅಧೀನತೆಯಲ್ಲಿ ಬದುಕುವಂತೆ ಮಾಡಿದೆ. ಅವರ ಹೊಲ-ಮನೆಗಳಲ್ಲಿ ದುಡಿದು ಕನಿಷ್ಠ ಮೂಲ ಸೌಕರ್ಯ ದೊರಕದೆ ಗೇಣುಹೊಟ್ಟೆ ತುಂಬಿಸಲು ಪರಿತಪಿಸುತ್ತವೆ. ಗುಡಿಕೈಗಾರಿಕೆ ಮತ್ತು ಉಪವೃತ್ತಿಯಿಂದ ಆರ್ಥಿಕ ಹೊರೆ ನಿಭಾಯಿಸುವುದು ಅಸಾಧ್ಯವೆಂದು ಅರಿತು, ಊರಿನ ಗೋಮಾಳದಲ್ಲಿ ಉಳುಮೆ ಮಾಡಿ ಕೃಷಿಕರಾಗುವ ತುಡಿತದಿಂದ 'ವೃತ್ತಿಪಲ್ಲಟ' ಮಾಡುವಂತಹ ಪ್ರಗತಿಯ ಮಾರ್ಗ ಅನುಸರಿಸಿವೆ.

ಈ ಅಲೆಮಾರಿ ಬುಡಕಟ್ಟುಗಳಿಗೆ ಅಸ್ತಿತ್ವವಿಲ್ಲದ ಬದುಕಾಗಿದೆ. ಇವರ ಸಾಮಾಜಿಕ ವ್ಯವಸ್ಥೆ. ಆಧುನಿಕ ಪ್ರಪಂಚದ ಮುಖಗಳು ಅರ್ಥವಾಗದಿರುವುದಕ್ಕೆ ಕಾರಣ ಸಮಾಜದ ಅಂಚಿನಲ್ಲಿ ಬದುಕುತ್ತಿರುವುದು. ಎರಡನೆಯದು, ಇವರಿಗೆ ಮೂಢನಂಬಿಕೆಗಳು ಕಾಡುತ್ತಿರುವುದರಿಂದ ಈ ವ್ಯವಸ್ಥೆ ಅರಿಯಲು ಮತ್ತು ತಮ್ಮ ಸಮುದಾಯದೊಳಗಿನ ಕಟ್ಟಳೆಗಳು, ಅನಿಷ್ಟಪದ್ಧತಿ, ಅಮಾನುಷ ವೃತ್ತಿಗಳು ನಿಲ್ಲಬೇಕಾದರೆ ಪ್ರಗತಿಪರತೆಯೆಡೆಗೆ ಸಾಗಬೇಕಾದರೆ 'ಅಕ್ಷರಜ್ಞಾನ' ಬೇಕೆನ್ನುವುದಾಗಿದೆ. ಈ ವ್ಯವಸ್ಥೆಯ ಶೋಷಣೆಯ ವಿರುದ್ಧ ಬಂಡಾಯ ಧ್ವನಿ ಎತ್ತಲೂ ಸಾಧ್ಯವೆಂಬುದನ್ನು ಗುರುತಿಸುತ್ತದೆ.

ಈ ಸಮುದಾಯ ಅಲ್ಪಸ್ವಲ್ಪ ಅಕ್ಷರ ಕಲಿತ ಝಿಮ್ರಿ ತಂದೆಯು ನಿಶ್ಚಯಿಸಿದ ಸಿರಿವಂತ ಮುದುಕನ ಜೊತೆಗೆ ಮದುವೆಯನ್ನು ಮುರಿದು ಈ ವ್ಯವಸ್ಥೆಯಿಂದ ದೂರ ಹೋಗುತಹತ್ತಾಳೆ.

ಅಕ್ಷರ ಕಲಿತು ಆಧುನಿಕ ಬದುಕಿಗೆ ಹೊಂದಿಕೊಂಡ 'ಹರಿ' ಸಮುದಾಯದ ಕಡೆ ತಿರುಗಿ ಸಹಾ ನೋಡದೆ ದೂರ ಉಳಿಯುವಂತಹ ಈ ಅಂಶಗಳನ್ನು ನೋಡಿದಾಗ ಪ್ರಜ್ಞಾವಂತಹರಾದವರು ತಮ್ಮ ಸಮುದಾಯದ ಒಳಿತಿಗೆ ಶ್ರಮಿಸದೆ ಇರುವಂತಹದು ಸಮುದಾಯದ ಹಿಂದುಳಿಯುವುದಕ್ಕೆ ಕಾರಣವಾಗಿದೆ.

ತಳಸಮುದಾಯಗಳ ಮೇಲೆ ವಸಾಹತೀಕರಣ, ಜಾಗತೀಕರಣ, ಉದಾರೀಕರಣಗಳ ಪ್ರಭಾವ ಆಗಿದೆ. ಇದರಿಂದ ಅಕ್ಷರಸ್ಥರಾಗಿ ನಗರಪ್ರದೇಶ ಪ್ರವೇಶಿಸಿದಾಗ ಅವರು ತಮ್ಮ ಕೆಲವು ಮೂಲ ಸಂಸ್ಕೃತಿಯನ್ನು ಬದಲಾಯಿಸಿಕೊಂಡು ಆಧುನಿಕತೆಗೆ ಹೊಂದಿಕೊಂಡು ಬದುಕುವ ಅನಿವಾರ್ಯತೆಯ ಅಂಶಗಳನ್ನು ಈ ಕಾದಂಬರಿಯಲ್ಲಿ ಅನಾವರಣಗೊಳಿಸುವ ಮೂಲಕ ಅರ್ಥೈಸುವ ಕಾರ್ಯವೈಶಿಷ್ಟ್ಯತೆಯನ್ನು ಮೆರೆದಿದೆ.

ತಳಸಮುದಾಯ ಮತ್ತು ನಾವು ಬದುಕುವ ಪ್ರದೇಶ ಪ್ರಗತಿಪರವಾಗಬೇಕಾದರೆ ಆಧುನೀಕರಣ, ಗಣಿಗಾರಿಕೆಗೆ ಹೊಂದಿಕೊಳ್ಳಬೇಕು ನಿಜ, ಆದರೆ ಅವು ಪ್ರಕೃತಿ, ಪರಿಸರ, ನಮ್ಮ ಇಡೀ ಬದುಕನ್ನು ಸರ್ವನಾಶ ಮಾಡುವಂತಹ ಗಣಿಗಾರಿಕೆ ತರಬಾರದು ಮತ್ತು ಅದನ್ನು ಮುಂದಿನ ತಲೆಮಾರಿಗೆ ಉಳಿಸಿಕೊಡುವಂತಹ ಜವಾಬ್ದಾರಿ ನಮ್ಮ ಮೇಲೆ ಇದೆ ಎಂಬ ಎಚ್ಚರಿಕೆ ಮಾತನ್ನು ಈ ಕಾದಂಬರಿಯ ಮೂಲಕ ಸಮಾಜಕ್ಕೆ ತಿಳಿಯ ಪಡಿಸುವ ಕಾರ್ಯ ಮಾಡಿದೆ. ಇದು ಪ್ರಸ್ತುತ ಮಹತ್ವಪೂರ್ಣ ವಾಸ್ತವದ ಸಂಗತಿಯನ್ನು ಗುರುತಿಸುತ್ತದೆ.

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಲಿಂಗ ಅಸಮಾನತೆಯನ್ನು ಗುರುತಿಸಲಾಗಿದೆ. ಹೆಣ್ಣನ್ನು ಎರಡನೇ ದರ್ಜೆಯವಳಾಗಿ ನೋಡುವಂತಹದ್ದು ಕಾಣುತ್ತೇವೆ. ಇಂತಹ ತಳಸಮುದಾಯಗಳಲ್ಲಿ ಸಹ ಹೆಣ್ಣಿನ ಶೋಷಣೆ ನಡೆಯುತ್ತದೆ. 'ಸಸಿಹಬ್ಬದ' ಮೂಲಕ ಅವಳ ಶೀಲಪಾವಿತ್ರ್ಯದ ಬಗ್ಗೆ ಪ್ರಶ್ನೆಯನ್ನು ಎತ್ತುತ್ತದೆ. ಉನ್ನತವರ್ಗಗಳು ತಳವರ್ಗದ ಹೆಣ್ಣನ್ನು ಉಂಡುಬಿಟ್ಟ ಎಂಜಲ ಎಲೆಯಂತೆ ಕಾಣುವಂತಹದು ಹೆಣ್ಣಿನ ಶೋಷಣೆಯಾಗಿದೆ. ಆದರೆ ಈ ವ್ಯವಸ್ಥೆಯಲ್ಲಿ ಗಟ್ಟಿತನ, ಗಂಡತ್ವ ಮನಸ್ಸಿನ ಹೆಣ್ಣುಗಳ ಬೆರಳಣಿಕೆಯಷ್ಟು ಕಾಣುತ್ತೇವೆ. ಆದರೆ ಅವಳ ಅಸ್ತಿತ್ವ ಪುರುಷ ಪ್ರಾಧಾನ್ಯತೆಯಲ್ಲಿಯೇ ಮುಂದುವರಿದಿದೆ ಎನ್ನುವಂತಹದ್ದನ್ನು ಈ ಕಾದಂಬರಿ ಗುರುತಿಸುತ್ತದೆ.

ಹವನ ಕೃತಿಯ ಲೇಖಕರು ಕಾದಂಬರಿಯನ್ನು ಎರಡು ಭಾಗವಾಗಿ ವಿಂಗಡಿಸಿ ಕೃತಿಗೆ ಬಹುಮುಖ ಆಯಾಮವನ್ನು ಒದಗಿಸಿಕೊಟ್ಟಿದ್ದಾರೆ. ಮೊದಲ ಭಾಗದಲ್ಲಿ ಇವರ ಸಾಂಸ್ಕೃತಿಕ ಬದುಕು ಮತ್ತು ತವಕ-ತಲ್ಲಣಗಳಿಗೆ ಆದರ್ಶತೆಯನ್ನು ಕೇಂದ್ರ ಪಾತ್ರದ ಮೂಲಕ ನಿರೂಪಿಸಿದ್ದಾರೆ. ಎರಡನೆಯ ಭಾಗದಲ್ಲಿ ಕಾದಂಬರಿಯ ಕೆಲವು ಉತ್ತಮ ಪಾತ್ರಗಳಿಗೆ ಸ್ವಯತ್ತತೆ, ಅಭಿವ್ಯಕ್ತಿ ಸ್ವಾತಂತ್ರ್ಯ ನೀಡಿ ಕಾದಂಬರಿಯನ್ನು ಸಂಕೀರ್ಣಗೊಳಿಸಿದೆ. ನಿರೂಪಣೆಯ ತಂತ್ರವನ್ನು ಬಳಸುವ

ಮೂಲಕ ಕಾದಂಬರಿಗೆ ಗಟ್ಟಿತನವನ್ನು ಒದಗಿಸಿದೆ ಹಾಗೂ ಈ ಸಮುದಾಯದ ಹೊಸ ತಲೆಮಾರಿನವರು ಆಧುನಿಕತೆಗೆ ಹೊಂದಿಕೊಂಡು ಬದಲಾದ ಬಹುಮುಖ ಆಯಾಮಗಳನ್ನು ಸಾಂಸ್ಕೃತಿಕ ಅಧಃಪತನವನ್ನು ಗುರುತಿಸಿದ್ದಲ್ಲದೆ ಸಮಾಜಕ್ಕೆ ಎಚ್ಚರಿಕೆಯ ತಮಟೆಯನ್ನು ಬಾರಿಸಿರುವುದು ಈ ಕೃತಿಯ ಒಡಲಿನಲ್ಲಿ ಅನಾವರಣಗೊಂಡಿದೆ.

ಈ ತಳಸಮುದಾಯದ ಸೋಮಾಲ್ಯನಾಯಕನ ಕನಸಿನ ತಾಂಡ ಉನ್ನತೀಕರಣವಾಗಬೇಕಾದರೆ ಪ್ರತಿಯೊಬ್ಬರೂ ಸ್ವಂತ ಭೂಮಿ ಪಡೆದು ಉಳುಮೆ ಮಾಡಬೇಕು ಮತ್ತು ಸಂಸ್ಕೃತಿ, ಸಂಪ್ರದಾಯಗಳೊಂದಿಗೆ ನೆಮ್ಮದಿಯ ಜೀವನ ನಡೆಸುವ ಚಿಂತನ ನೆಲೆಯಲ್ಲಿ ನಡೆಯಬೇಕು ಎಂಬ ಆಶಯವಾಗಿದೆ ಆದರೆ ಇವನ ಮಗ 'ಲೋಕು' ವಿದ್ಯಾವಂತನಾಗದೆ ಹಣದ ಆಮಿಷಕ್ಕೆ ಬೆನ್ನುಬಿದ್ದು ಕೈಗಾರೀಕರಣದ ಗಣಿಗಾರಿಕೆ ತರುವ ಮೂಲಕ ತಮ್ಮ ಸಮುದಾಯದ ಪಾರಂಪರಿಕ ಸಾಂಸ್ಕೃತಿಕ ಅಧಃಪತನ ಮತ್ತು ಶ್ರಮಜೀವಿಗಳ ಬದುಕಿನ ಅತಂತ್ರಕ್ಕೆ ಕಾರಣವಾಗುವಂತಹ ತದವಿರುದ್ಧದ ನೆಲೆಗಳು ನಿರೂಪಿತವಾಗಿರುವುದು ಇಲ್ಲಿ ಕಾಣುತ್ತೇವೆ.

ಸಾಮಾಜಿಕ ವ್ಯವಸ್ಥೆಯಲ್ಲಿ ಭೂಸಂಪತ್ತು ಉನ್ನತವರ್ಗದವರಿಗೆ ಸೀಮಿತವಾಗಿದೆ. ತಳಸಮುದಾಯಗಳು ಕನಿಷ್ಠ ಮೂಲಭೂತ ಸೌಕರ್ಯ ದೊರಕದೆ ಅಮಾನುಷ ಸ್ಥಿತಿಯಲ್ಲಿ ಬದುಕುತ್ತಿವೆ. ಅದಕ್ಕಾಗಿ ಅರ್ಥಿಕ ಸಂಕಷ್ಟ, ಅಸಮಾನತೆ ಎದುರಿಸುವುದರಿಂದ ಊರಿನ ಗೋಮಾಳದಲ್ಲಿ ಕೃಷಿ ಮಾಡುವ ಮೂಲಕ, ಕಾನೂನುಗಳ ಮೂಲಕ ತಳಸಮುದಾಯದ ಏಳಿಗೆಗೆ ಮತ್ತು ಭೂಹಂಚಿಕೆಗಳ ಪ್ರಶ್ನೆಯನ್ನು ಎತ್ತುವಂತಹದು ಈ ಕಾದಂಬರಿಯಲ್ಲಿ ಮೂಡಿಬಂದಿದೆ.

ಹವನದಲ್ಲಿ ಆದರ್ಶತೆ, ಮಾನವೀಯತೆ, ಆಧ್ಯಾತ್ಮಿಕತೆ, ರಾಷ್ಟ್ರೀಯತೆಯ ಅಂಶಗಳನ್ನು, ಸಮಾಜಕ್ಕೆ ಅವಶ್ಯಕ ಎಂಬ ಪ್ರಗತಿಪರ ಚಿಂತನೆಯನ್ನು ಕೇಂದ್ರಪಾತ್ರದ ಮೂಲಕ ವ್ಯವಸ್ಥೆಯ ಬದಲಾವಣೆಗೆ ಶ್ರಮಿಸುತ್ತಾರೆ. ಆದರೆ ಇಂತಹ ಆದರ್ಶ ವ್ಯಕ್ತಿಯನ್ನು ದುರಂತಕ್ಕೆ ಇಳಿಸುವ ಮೂಲಕ ಈ ವ್ಯವಸ್ಥೆ ಬದಲಾವಣೆಯಾಗಿ ಮೂಲಸಂಸ್ಕೃತಿಯ ಅಧಃಪತನ ಮತ್ತು ಗಣಿಗಾರಿಕೆಯಿಂದ ಬರುವಂತಹ ಸಂದಿಗ್ಧತೆಯ ಪರಿಸ್ಥಿತಿಯನ್ನು ನೋಡಿ ಸಹಿಸದೆ ಮಾನಸಿಕ ಅಸ್ತವ್ಯಸ್ತನಾಗಿ ಗಣಿಗಾರಿಕೆಯಲ್ಲಿ ದುರಂತ ಸಾವಿಗೆ ಶರಣಾಗುವ ಮೂಲಕ ಕೈಗಾರೀಕರಣವನ್ನು ವಿರೋಧಿಸುವ ನೀತಿಯನ್ನು ಈ ನಿರೂಪಣೆಯ ಕ್ರಮದಲ್ಲಿ ಗುರುತಿಸುತ್ತದೆ.

ಈ ಮೂರು ಕಾದಂಬರಿಗಳು ತಳವರ್ಗಗಳನ್ನು ಭಿನ್ನ ಸ್ವರೂಪದಲ್ಲಿ ಚಿತ್ರಿಸಿವೆ. ಇವುಗಳನ್ನು ವೈಭವೀಕರಿಸಿ ಚಿತ್ರಿಸಿಲ್ಲ. ಇವು ಸಾಮಾನ್ಯವರ್ಗದ ವ್ಯವಸ್ಥೆಯಲ್ಲಿ ವಾಸ್ತವದ ಬದುಕನ್ನು ಚಿತ್ರಿಸುವಂತಹ ಕಾದಂಬರಿಗಳಾಗಿವೆ. ಇವುಗಳ ರಚನಾಕಾರರು ಒಂದೇ ಪ್ರದೇಶದವರಾದರೂ, ಅವರ ಚಿಂತಿಸುವ ಅಲೋಚನಾಕ್ರಮ, ಲೋಕದೃಷ್ಟಿ, ವೈಚಾರಿಕ ಚಿಂತನಾ ನೆಲೆಗಳು ಭಿನ್ನ ಸ್ವರೂಪದ್ದಾಗಿವೆ

ಎಂಬುದನ್ನು ಕಾದಂಬರಿಗಳ ಒಡಲಿನಿಂದ ಅರಿಯಲಾಗಿದೆ. ಜಾತಿ ಅಸಮಾನತೆ, ಲಿಂಗ ಅಸಮಾನತೆ, ಜಮೀನ್ದಾರಿ ವ್ಯವಸ್ಥೆಯ ಶೋಷಣೆ, ತವಕ–ತಲ್ಲಣಗಳು ನಿರ್ಲಕ್ಷ್ಯ ಸೆಳೆವುಗಳಲ್ಲಿ ಈ ಸಮುದಾಯಗಳು ನಲುಗಿವೆ ಎಂಬುದನ್ನು ಒಂದು ಕಡೆ ಗುರುತಿಸಿದರೆ ಇನ್ನೊಂದು ಕಡೆ ತಮ್ಮ ಜನಾಂಗದೊಳಗಿನ ಸಂಸ್ಕೃತಿ, ನ್ಯಾಯಸಂಹಿತೆ, ಬಿಕ್ಕಟ್ಟುಗಳಿಂದ ಬಿಡಿಸಿಕೊಳ್ಳಲಾಗದೆ ಅದರ ಏಳುಬೀಳಿನ ಮಗ್ಗಲುಗಳನ್ನು ಗುರುತಿಸಿವೆ. ಅಲ್ಲದೆ ಅದರೊಳಗೆ ತಮ್ಮ ಸಾಂಸ್ಕೃತಿಕ ಬದುಕಿನ ಅನನ್ಯತೆಯನ್ನು ಹೇಗೆ ಉಳಿಸಿಕೊಂಡು ಬಂದಿವೆ ಎಂಬುದನ್ನು ಈ ಮೂರು ಕಾದಂಬರಿಗಳ ಒಟ್ಟು ಬದುಕಿನ ಚಿತ್ರಣವನ್ನು ಸೃಜಿಸಿ ಚಿತ್ರಿಸುವ ಮೂಲಕ ಸಾಹಿತ್ಯಲೋಕಕ್ಕೆ ಹೊಸ ಕೊಡುಗೆ ನೀಡಿದ್ದಾರೆ. ಈ ತಳವರ್ಗದ ಕಾದಂಬರಿಗಳ ಒಡಲೊಳಗಿನ ಮೂಲಾಂಶ ಅರಿಯಲು ಈ ಮೂರು ಕಾದಂಬರಿಗಳ ಅಧ್ಯಯನದಿಂದ ಈ ಮೇಲಿನ ವೈಶಿಷ್ಟ್ಯಗಳನ್ನು ಅರಿಯಲು ಸಾಧ್ಯವಾಗಿದೆ.

ಅಧ್ಯಾಯ ಆರು

# ಸಮಾರೋಪ

ಕರ್ನಾಟಕದ ಪ್ರಾಂತ್ಯವಾರು ವಿಂಗಡನೆಯಲ್ಲಿ ಹೈದರಾಬಾದ್ ಕರ್ನಾಟಕವು ಒಂದು ವಿಶಿಷ್ಟ ಪರಂಪರೆಯನ್ನು ಹೊಂದಿದೆ. ಹೈದರಾಬಾದ್ ಕರ್ನಾಟಕವು ಆರ್ಥಿಕ, ಸಾಮಾಜಿಕ, ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದ ಪ್ರದೇಶವಾಗಿದೆ. ಆದರೆ ಈ ಮಾತು ಸಾಹಿತ್ಯ ಮತ್ತು ಧಾರ್ಮಿಕ ಕ್ಷೇತ್ರಕ್ಕೆ ಹೊರತಾಗಿದೆ. ಕರ್ನಾಟಕದಲ್ಲಿ ಸಾಹಿತ್ಯ ಮತ್ತು ಧಾರ್ಮಿಕ ಕ್ಷೇತ್ರಕ್ಕೆ ಹೆಚ್ಚು ಕೊಡುಗೆಯನ್ನು ನೀಡಿದ ಪ್ರಾಚೀನತೆಯನ್ನು ಈ ಭಾಗವು ಒಳಗೊಂಡಿದೆ. ಧರ್ಮ ಮತ್ತು ಸಾಹಿತ್ಯಕ್ಷೇತ್ರಕ್ಕೆ ಸಾಕಷ್ಟು ಕೊಡುಗೆಯನ್ನು ನೀಡಿರುವ ಈ ಭಾಗದ ಜನಜೀವನದಲ್ಲಿ ಬಡತನ ಹಾಗೂ ಜಾತೀಯತೆಯು ಹೆಚ್ಚು ತಾಂಡವಾಡುತ್ತಿದೆ. ಇದಕ್ಕೆ ಕಾರಣವನ್ನು ಶೋಧಿಸುವ ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಕೈಗೊಂಡಿದ್ದು, ಇದಕ್ಕೆ ಪೂರಕವಾದ ಮಾಹಿತಿಯನ್ನು ಕಟ್ಟಿಕೊಡುವ ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿ ರಚನೆಯಾಗಿರುವ ಕಾದಂಬರಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇಲ್ಲಿ ತಳಸಮುದಾಯಗಳ ಜೀವನಕ್ರಮವನ್ನು ಕಟ್ಟಿಕೊಡುವ ಪ್ರಮುಖವಾಗಿ ಮೂರು ಕಾದಂಬರಿಗಳನ್ನು ಕೇಂದ್ರವಾಗಿಟ್ಟುಕೊಂಡು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಹೈದರಾಬಾದ್ ಕರ್ನಾಟಕದಲ್ಲಿ ಸಾಮಾಜಿಕವಾಗಿ ಅತ್ಯಂತ ಹಿಂದುಳಿದ ಜಾತಿಗಳಲ್ಲಿ ಕೊರವ, ಲಮಾಣಿ, ಜಾತಿಗೇರ ಸಮುದಾಯಗಳು ಪ್ರಮುಖವಾಗಿ ಕಂಡುಬರುತ್ತವೆ. ಆದ್ದರಿಂದ ಈ ಮೂರು ಸಮುದಾಯಗಳನ್ನು ಕೇಂದ್ರವಾಗಿಟ್ಟುಕೊಂಡು ರಚನೆಯಾಗಿರುವ ಜಂಬಣ್ಣ ಅಮರಚಿಂತರ 'ಕುರುಮಯ್ಯ ಮತ್ತು ಅಂಕುಶದೊಡ್ಡಿ', ಮಲ್ಲಿಕಾರ್ಜುನ ಹಿರೇಮಠರ 'ಹವನ', ಹಾಗೂ ಶಾಂತರಸರ 'ಸಣ್ಣಗೌಡಸಾನಿ' ಕಾದಂಬರಿಗಳನ್ನು ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಮೂರು ಜಾತಿಯಾಧಾರಿತ ಕಾದಂಬರಿಗಳು ಹೈದರಾಬಾದ್ ಕರ್ನಾಟಕದಲ್ಲಿ ಕಂಡುಬರುವ ತಳಸಮುದಾಯಗಳ ಜೀವನಕ್ರಮವನ್ನು ಕಟ್ಟಿಕೊಡುವುದರ ಜೊತೆಗೆ ಉನ್ನತವರ್ಗದ ಜಮೀನ್ದಾರಿ ವ್ಯವಸ್ಥೆ ಹಾಗೂ ಬಂಡವಾಳಶಾಹಿಗಳಿಂದ ತಳಸಮುದಾಯಗಳು ಶೋಷಣೆಗೆ ಗುರಿಯಾಗಿರುವ ಬಗೆಯನ್ನು ಅನಾವರಣಗೊಳಿಸುತ್ತವೆ. ಈ ಮೂರು ಸಮುದಾಯ ಆಧಾರಿತ ಕಾದಂಬರಿಗಳು

ಸೃಜನಶೀಲ ಬರಹಗಳಾಗಿ ಕಂಡುಬಂದರೂ ಇವು ತಳಸಮುದಾಯಗಳ ಜನಜೀವನದ ನೈಜ ಚಿತ್ರಣವನ್ನು ಪರಿಚಯಿಸುತ್ತವೆ.

ಜಂಬಣ್ಣ ಅಮರಚಿಂತರ 'ಕುರುಮಯ್ಯ ಮತ್ತು ಅಂಕುಶದೊಡ್ಡಿ' ಕಾದಂಬರಿಯು ಹೈದರಾಬಾದ್ ಕರ್ನಾಟಕದ ರಾಯಚೂರು ಪ್ರಾಂತ್ಯದಲ್ಲಿ ಕಂಡುಬರುವ ಕೊರವ ಜನಾಂಗದ ನೈಜ ಬದುಕನ್ನು ಅನಾವರಣಗೊಳಿಸುತ್ತದೆ. ಈ ಪ್ರಾಂತ್ಯದಲ್ಲಿ ಸಾಮಾಜಿಕವಾಗಿ ತಿರಸ್ಕಾರಕ್ಕೆ ಗುರಿಯಾಗಿರುವ ಈ ಜನಾಂಗವು ಬಡತನದ ಬವಣೆಯಲ್ಲಿಯೇ ತಮ್ಮ ಜೀವನವನ್ನು ರೂಪಿಸಿಕೊಂಡಿರುತ್ತದೆ. ಆದರೆ ಜಮೀನ್ದಾರಿ ವ್ಯವಸ್ಥೆಯ ರೂವಾರಿಗಳು ತಮ್ಮ ಅಸ್ತಿತ್ವದ ಉಳಿವಿಗಾಗಿ ಈ ಜನಾಂಗವನ್ನು ಅಸ್ತ್ರವಾಗಿ ಬಳಸಿಕೊಳ್ಳುತ್ತಾರೆ. ಜಮೀನ್ದಾರಿ ವ್ಯವಸ್ಥೆಯಿಂದ ಈ ಜನಾಂಗವು ಶೋಷಣೆಗೆ ಒಳಗಾದ ಬಗೆಯನ್ನು ಅಮರಚಿಂತರು ನೈಜತೆಯ ನೆಲೆಯಲ್ಲಿ ಕಟ್ಟಿಕೊಟ್ಟಿದ್ದಾರೆ. ಈ ಕಾದಂಬರಿಯು ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿ ಕಂಡುಬರುವ ತಳಸಮುದಾಯಗಳ ಬದುಕನ್ನು ಅನಾವರಣಗೊಳಿಸುತ್ತದೆ.

ಮಲ್ಲಿಕಾರ್ಜುನ ಹಿರೇಮಠರ 'ಹವನ' ಕಾದಂಬರಿಯು ಅಲೆಮಾರಿ ಬದುಕಿನಿಂದ ಒಂದು ಕಡೆ ಶಾಶ್ವತವಾಗಿ ನೆಲೆಯೂರಿದ ಲಮಾಣಿ ಜನಾಂಗದ ಜೀವನಕ್ರಮ ಹಾಗೂ ಅವರ ಸಾಂಸ್ಕೃತಿಕ ಚಹರೆಗಳನ್ನು ಕಟ್ಟಿಕೊಡುತ್ತದೆ. ಹೈದರಾಬಾದ್ ಕರ್ನಾಟಕದಲ್ಲಿ ಕಂಡುಬರುವ ಈ ಜನಾಂಗವು ಕೂಡ ಆರ್ಥಿಕವಾಗಿ ಅತ್ಯಂತ ಹಿಂದುಳಿದಿದ್ದು, ಬಡತನದಲ್ಲಿಯೇ ತಮ್ಮ ಬದುಕನ್ನು ರೂಪಿಸಿಕೊಂಡ ವರ್ಗವಾಗಿದೆ. ಈ ಜನಾಂಗವು ಮೂಲತಃ ಅಲೆಮಾರಿ ಜನಾಂಗವಾಗಿದ್ದು, ಒಂದು ಕಡೆಯಲ್ಲಿ ನಿಲ್ಲುವುದು ಅನಿವಾರ್ಯವಾದಾಗ ಪ್ರತ್ಯೇಕವಾದ ತಾಂಡಗಳನ್ನು ನಿರ್ಮಿಸಿಕೊಂಡು ತಮ್ಮ ಬದುಕನ್ನು ರೂಪಿಸಿಕೊಂಡಿದ್ದಾರೆ. ಆದರೆ ಜಮೀನ್ದಾರಿ ವ್ಯವಸ್ಥೆ ಹಾಗೂ ಬಂಡವಾಳಶಾಹಿಗಳ ಕುತಂತ್ರದಿಂದ ಈ ಜನಾಂಗದ ಜೀವನದ ಮೇಲೆ ಉಂಟಾದ ಶೋಷಣೆಯ ನೆಲೆಗಳನ್ನು ಪ್ರಸ್ತುತ ಕಾದಂಬರಿಯಲ್ಲಿ ಅನಾವರಣಗೊಳಿಸಲಾಗಿದೆ. ಅಷ್ಟೇ ಅಲ್ಲದೆ ಪರಂಪರೆ ಮತ್ತು ಆಧುನಿಕತೆಯ ನಡುವಿನ ಸಂಘರ್ಷವನ್ನು ಪ್ರಸ್ತುತ ಕಾದಂಬರಿಯಲ್ಲಿ ಕಟ್ಟಿಕೊಡಲಾಗಿದೆ. ಹಾಗೆಯೇ ಶಾಂತರಸರ 'ಸಣ್ಣಗೌಡಸಾನಿ' ಕಾದಂಬರಿಯು ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿ ಕಂಡುಬರುವ ಜಾತಿಗೇರ ಸಮುದಾಯದ ಜೀವನವನ್ನು ಪ್ರತಿನಿಧಿಸುತ್ತದೆ. ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂದುಳಿದಿರುವ ಈ ಜನಾಂಗವನ್ನು ಉನ್ನತವರ್ಗಗಳು ನಡೆಸಿಕೊಳ್ಳುವ ಬಗೆಯನ್ನು ಇಲ್ಲಿ ಅನಾವರಣಗೊಳಿಸಲಾಗಿದೆ. ಬಡತನದ ಬೇಗೆಯನ್ನು ಅನುಭವಿಸುತ್ತಿರುವ ಈ ಜನಾಂಗದ ಮಹಿಳೆಯು ತನ್ನ ಆಸೆ ಆಕಾಂಕ್ಷೆಗಳನ್ನು ಬದಿಗೊತ್ತಿ ಜಮೀನ್ದಾರರ ಇಚ್ಛೆಯಂತೆ ನಡೆದುಕೊಳ್ಳುವಾಗ ಉಂಟಾಗುವ ತಳಮಳಗಳನ್ನು ಇಲ್ಲಿ ಕಾದಂಬರಿಕಾರರು ಪರಿಚಯಿಸಿದ್ದಾರೆ. ಸಾಮಾಜಿಕ ಅಸಮಾನತೆ, ಬಡತನ, ನಿರುದ್ಯೋಗಗಳಿಂದ ಉಂಟಾಗುವ ಅನಾಹುತಗಳನ್ನು ಈ ಮೂರು ಕಾದಂಬರಿಗಳು ಪರಿಚಯಿಸುತ್ತವೆ.

ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ತಳಸಮುದಾಯದ ಜೀವನಕ್ರಮವನ್ನು ಪ್ರತಿನಿಧಿಸುವಂತಹ ಈ ಮೂರು ಕಾದಂಬರಿಗಳಲ್ಲಿ ಒಂದು ವಿಶಿಷ್ಟತೆಯಿದೆ. ಅದೇಂದರೆ ಈ ಮೂರು ಕಾದಂಬರಿಗಳ ಕರ್ತೃಗಳು ಭಿನ್ನ ಸಮುದಾಯದವರಾಗಿದ್ದಾರೆ. ಜಂಬಣ್ಣ ಅಮರಚಿಂತರು ಮೂಲತಃ ತಳಸಮುದಾಯದಲ್ಲಿ ಜನಿಸಿದ ಇವರು ಈ ಜನಾಂಗದ ಜೀವನವನ್ನು ಹತ್ತಿರದಿಂದ ನೋಡಿದವರು. ಮಾತ್ರವಲ್ಲದೆ, ಸ್ವತಃ ಈ ಜನಾಂಗವು ಅನುಭವಿಸುತ್ತಿರುವ ಅಸಮಾನತೆಯ ನೋವನ್ನು ಅನುಭವಿಸಿದವರಾಗಿದ್ದಾರೆ. ಮಲ್ಲಿಕಾರ್ಜುನ ಹಿರೇಮಠ ಹಾಗೂ ಶಾಂತರಸರು ಉನ್ನತ ವರ್ಗದಲ್ಲಿ ಜನಿಸಿ ತಳಸಮುದಾಯದ ಜೀವನಕ್ರಮವನ್ನು ಹೊರಗಿನಿಂದ ನೋಡಿ ಕಾದಂಬರಿಯನ್ನು ರಚಿಸಿದವರಾಗಿದ್ದಾರೆ. ಈ ಎರಡು ಬಗೆಯ ನಿರೂಪಣೆಗಳು ಇಲ್ಲಿ ಕಂಡುಬರುತ್ತವೆ. ಆದರೆ ಈ ಮೂರು ಕಾದಂಬರಿಗಳ ಕರ್ತೃಗಳು ಬಂಡಾಯ ಸಾಹಿತ್ಯದ ತಾತ್ವಿಕತೆಯನ್ನು ಮೈಗೂಡಿಸಿಕೊಂಡವರಾಗಿದ್ದಾರೆ. ಹೀಗಾಗಿ ಇಲ್ಲಿ ಯಾವುದೇ ಅನ್ಯತೆಯ ಭಾವವನ್ನು ತಾಳದೆ ಶೋಷಣೆಗೆ ಒಳಗಾದ ಸಮುದಾಯದ ಪರವಾದ ತುಡಿತ ವ್ಯಕ್ತಪಡಿಸಿರುವುದನ್ನು ಪ್ರಸ್ತುತ ಕಾದಂಬರಿಯಲ್ಲಿ ಗುರುತಿಸಬಹುದಾಗಿದೆ. ಈ ಮೂರು ಕಾದಂಬರಿಗಳಲ್ಲಿ ಅಸಮಾನತೆಯನ್ನು ತೊಡೆದುಹಾಕಿ ಸಮಾನತೆಯನ್ನು ಸಾರುವ ಆಶಯವು ಪ್ರಮುಖವಾಗಿ ಕಂಡುಬರುತ್ತದೆ.

### ೬.೧. ಅಧ್ಯಯನದ ಫಲಿತಗಳು

- ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡಿರುವ ಈ ಮೂರು ಸಮುದಾಯ ಕೇಂದ್ರಿತ ಕಾದಂಬರಿಗಳು ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಪ್ರಾದೇಶಿಕ ಹಿನ್ನೆಲೆಯನ್ನು ಪರಿಚಯಿಸುತ್ತವೆ. ಈ ಮೂವರು ಕಾದಂಬರಿಕಾರರು ಇದೇ ಪ್ರಾಂತ್ಯದವರಾಗಿದ್ದು, ಇಲ್ಲಿನ ಆದಿಮ ಜನಾಂಗ ಹಾಗೂ ಅಲೆಮಾರಿ ಬುಡಕಟ್ಟು ಜನಾಂಗಗಳ ಸಾಮಾಜಿಕ ಸ್ಥಿತಿಗತಿಗಳನ್ನು ಗುರುತಿಸಿ ಸಮಾಜಕ್ಕೆ ಪರಿಚಯಿಸುವ ಕಾರ್ಯ ಮಾಡಿರುವುದು ಕಂಡುಬರುತ್ತದೆ.

- ಭಾರತದ ಪುರೋಹಿತಶಾಹಿ ವ್ಯವಸ್ಥೆಯು ಹಿಂದಿನಿಂದಲೂ ಇಲ್ಲಿನ ಮೂಲ ನಿವಾಸಿಗಳಾದ ಬುಡಕಟ್ಟು ಮತ್ತು ಆದಿಮ ಜನಾಂಗಗಳನ್ನು ಶೋಷಣೆಗೆ ಒಳಪಡಿಸಿಕೊಂಡು ಬಂದಿದೆ. ಆದರೆ ಬದಲಾದ ಪ್ರಜಾಪ್ರಭುತ್ವ ಕಾಲದಲ್ಲಿ ಜಮೀನ್ದಾರಿ ವ್ಯವಸ್ಥೆ, ಬಂಡವಾಳಶಾಹಿಗಳು ಹಾಗೂ ರಾಜಕೀಯ ವ್ಯವಸ್ಥೆಯು ಈ ಸಮುದಾಯಗಳನ್ನು ಪುರೋಹಿತಶಾಹಿಗಿಂತ ನಿಕೃಷ್ಟ ನೆಲೆಯಲ್ಲಿ ಶೋಷಣೆಗೆ ಒಳಪಡಿಸಿರುವ ಬಗೆಯನ್ನು ಈ ಪ್ರಾಂತ್ಯದ ಕಾದಂಬರಿಕಾರರು ತಮ್ಮ ಬರಹಗಳಲ್ಲಿ ಗುರುತಿಸಿದ್ದಾರೆ.

- ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡಿರುವ ಈ ಮೂರು ಜಾತಿಕೇಂದ್ರಿತ ಕಾದಂಬರಿಗಳು ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿನ ತಳಸಮುದಾಯಗಳ ಜೀವನಕ್ರಮವನ್ನು

ಅನಾವರಣಗೊಳಿಸುತ್ತವೆ. ಉನ್ನತವರ್ಗಗಳ ಕುತಂತ್ರಕ್ಕೆ ಬಲಿಯಾಗಿ ತಮ್ಮ ಬದುಕಿನ ನೆಲೆಗಳನ್ನು ಕಳೆದುಕೊಂಡು ಅನಾಥಪ್ರಜ್ಞೆಯನ್ನು ಅನುಭವಿಸುತ್ತಿರುವ ದಾರುಣ ಚಿತ್ರಣವನ್ನು ಈ ಮೂರು ಕಾದಂಬರಿಗಳಲ್ಲಿ ಕಟ್ಟಿಕೊಡಲಾಗಿದೆ.

• ಹೈದರಾಬಾದ್ ಕರ್ನಾಟಕದಲ್ಲಿ ಕಂಡುಬರುವ ಜಮೀನ್ದಾರಿಗಳ ಯಜಮಾನಿಕೆಯ ರೀತಿಯಿಂದ ಬೇಸತ್ತ ಜನರು ತಮ್ಮ ಬದುಕಿನ ನೆಲೆಗಾಗಿ ಮತ್ತು ಆರ್ಥಿಕವಾಗಿ ಸದೃಢತೆಯನ್ನು ಕಂಡುಕೊಳ್ಳಲು ವೃತ್ತಿಪಲ್ಲಟವನ್ನು ಕೈಗೊಂಡು ಹೊಸ ಬದುಕನ್ನು ಕಟ್ಟಿಕೊಳ್ಳುವ ಆಶಯವು ಈ ಮೂವರು ಕಾದಂಬರಿಕಾರರ ಬಂಡಾಯದ ಧೋರಣೆಯಾಗಿ ಕಂಡುಬರುತ್ತದೆ.

• ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಪ್ರಾದೇಶಿಕ ಹಿನ್ನೆಲೆಯನ್ನು ಪರಿಚಯಿಸುವ ಈ ಮೂರು ಕಾದಂಬರಿಗಳು ತಳಸಮುದಾಯಗಳ ವಿಭಿನ್ನ ಸಮಸ್ಯೆಗಳನ್ನು ಎತ್ತಿಹಿಡಿಯುತ್ತವೆ. ಇಲ್ಲಿ ಕಂಡುಬರುವ ಮೂರು ಪ್ರತ್ಯೇಕ ಜಾತಿಗಳು ಸಾಮಾಜಿಕವಾಗಿ ಶೋಷಣೆಗೆ ಒಳಗಾದವುಗಳಾಗಿವೆ. ಪ್ರಸ್ತುತ ಸಮಾಜದಲ್ಲಿ ಕಂಡುಬರುವ ತಳಸಮುದಾಯಗಳ ವಿವಿಧ ಸಮಸ್ಯೆಯ ನೆಲೆಗಳನ್ನು ಈ ಮೂರು ಕಾದಂಬರಿಗಳು ಅನಾವರಣಗೊಳಿಸುತ್ತವೆ.

• ಹೈದರಾಬಾದ್ ಕರ್ನಾಟಕದ ಪ್ರಾದೇಶಿಕ ಹಿನ್ನೆಲೆಯನ್ನು ಪರಿಚಯಿಸುವ ಈ ಮೂರು ಕಾದಂಬರಿಗಳ ರಚನಾಕಾರರು ವಿಭಿನ್ನ ಸಮುದಾಯದವರಾಗಿದ್ದಾರೆ. ಇಲ್ಲಿ ಜಾತೀಯತೆಯ ನೋವನ್ನು ಸ್ವತಃ ಅನುಭವಿಸಿ ಆ ಸಮುದಾಯದ ಸಂವೇದನೆಗಳನ್ನು ಕಟ್ಟಿಕೊಟ್ಟಿರುವುದು ಕಂಡುಬರುತ್ತದೆ. ಹಾಗೆಯೇ ಜಾತೀಯತೆಯ ಯಾವುದೇ ಅನುಭವವಿಲ್ಲದೆ ಕೇವಲ ನೋಡಿದ ಅನುಭವದಲ್ಲಿ ಕಾದಂಬರಿಗಳನ್ನು ರಚನೆ ಮಾಡಿರುವವರೂ ಕಂಡುಬರುತ್ತಾರೆ. ಈ ಎರಡು ಪ್ರಕಾರದ ಕಾದಂಬರಿ ರಚನೆಯನ್ನು ಸೂಕ್ಷ್ಮವಾಗಿ ಅಧ್ಯಯನಕ್ಕೆ ಒಳಪಡಿಸಿದರೆ ಕೆಲವು ಸೂಕ್ಷ್ಮ ವ್ಯತ್ಯಾಸಗಳು ತಿಳಿದುಬರುತ್ತವೆ. ಆದರೆ ಈ ಮೂವರು ಕಾದಂಬರಿಕಾರರ ಒಟ್ಟಾರೆ ಆಶಯವೆಂದರೆ ಶೋಷಣೆಯ ವಿರುದ್ಧ ಜಾಗೃತಗೊಳಿಸುವುದಾಗಿದೆ.

• ಪ್ರಸ್ತುತ ಕಾದಂಬರಿಗಳಲ್ಲಿ ಆಧುನಿಕ ಕನ್ನಡ ಸಾಹಿತ್ಯದ ನವೋದಯ, ಪ್ರಗತಿಶೀಲ, ನವ್ಯಸಾಹಿತ್ಯ ಪ್ರಕಾರಗಳಲ್ಲಿ ಕಂಡುಬರುವ ಪ್ರಕೃತಿ ಸೌಂದರ್ಯ, ರಂಜನೀಯತೆಯ ವರ್ಣನೆಗೆ ಮಾನ್ಯತೆ ನೀಡದೆ ಸಮಕಾಲೀನ ಸಂದರ್ಭದಲ್ಲಿ ಈ ಅಲಕ್ಷಿತ ಸಮುದಾಯಗಳು ಶೋಷಣೆಯಿಂದ ಮುಕ್ತವಾಗುವ ಧೋರಣೆಗಳು ಇಲ್ಲಿ ಪ್ರಮುಖವಾಗಿ ಕಂಡುಬರುತ್ತವೆ.

• ಹೈದರಾಬಾದ್ ಕರ್ನಾಟಕದ ಪ್ರಾದೇಶಿಕ ಹಿನ್ನೆಲೆಯನ್ನು ಪರಿಚಯಿಸುವ ಈ ಮೂರು ಕಾದಂಬರಿಗಳ ಮತ್ತೊಂದು ವಿಶಿಷ್ಟ ಕ್ರಮವೆಂದರೆ ಪರಂಪರೆ ಮತ್ತು ಆಧುನಿಕತೆಯ ನಡುವಿನ ಸಘರ್ಷದ ನೆಲೆಗಳನ್ನು ಪ್ರಮುಖವಾಗಿ ಗುರುತಿಸಲಾಗಿದೆ. ಆಧುನಿಕತೆಯ ಭರಾಟೆಯಲ್ಲಿ

ಪರಂಪರಾಗತವಾದ ಸಾಂಸ್ಕೃತಿಕ ಚಹರೆಗಳನ್ನು ಕಳೆದುಕೊಳ್ಳುತ್ತಿರುವ ಆತಂಕದ ನೆಲೆಗಳನ್ನು ಇಲ್ಲಿನ ಕಾದಂಬರಿಗಳಲ್ಲಿ ಗುರುತಿಸಬಹುದಾಗಿದೆ.

• ಪ್ರಸ್ತುತ ಕಾದಂಬರಿಗಳ ನಿರೂಪಣಾಕ್ರಮದಲ್ಲಿ ಕಾದಂಬರಿಕಾರರು ವಿಭಿನ್ನ ಮಾದರಿಗಳನ್ನು ಅನುಸರಿಸಿರುವುದು ಕಂಡುಬರುತ್ತದೆ. ಹಾಗೆಯೇ ಇಲ್ಲಿನ ಭಾಷಾವೈಶಿಷ್ಟ್ಯತೆಯೂ ಕೂಡ ಹೈದರಾಬಾದ್ ಕರ್ನಾಟಕದ ಪ್ರಾದೇಶಿಕ ಸೊಗಡನ್ನು ಕಟ್ಟಿಕೊಡುತ್ತದೆ.

ಹೈದರಾಬಾದ್ ಕರ್ನಾಟಕದ ಜಮೀನ್ದಾರಿಗಳ ಅಧೀನತೆಯಿಂದ ಹೊರಬಂದು ಅಲೆಮಾರಿ, ಅರೆಅಲೆಮಾರಿ ಹಾಗೂ ಆದಿಮ ಜನಾಂಗಗಳು ಆಧುನಿಕ ಯುಗದಲ್ಲಿ ತಮ್ಮ ಪಾರಂಪರಿಕ ಜೀವನಶೈಲಿಯನ್ನು ಬದಲಾಯಿಸಿಕೊಂಡು ಶಿಕ್ಷಣದಿಂದ ಜಾಗೃತರಾಗಬೇಕಾದ ಅನಿವಾರ್ಯತೆಗಳು ಈ ಮೂರು ಕಾದಂಬರಿಗಳಲ್ಲಿ ಕಂಡುಬರುತ್ತದೆ.

# ಆಕರ ಗ್ರಂಥಗಳು

## ಮೂಲ ಪಠ್ಯಗಳು


೧. ಜಂಬಣ್ಣ ಅಮರಚಿಂತರು, ಕುರುಮಯ್ಯ ಮತ್ತು ಅಂಕುಶದೊಡ್ಡಿ, ಪ್ರಕಾಶಕರು ಬಸಂತ ಕುಮಾರ ಸುಣಗಾರ, ಗುಲಬರ್ಗಾ, ೧೯೯೪.

೨. ಮಲ್ಲಿಕಾರ್ಜುನ ಹಿರೇಮಠ, ಹವನ, ಆನಂದಕಂದ, ಗ್ರಂಥಮಾಲೆ, ಮಲ್ಲಾಡಿಹಳ್ಳಿ, ೨೦೧೩.

೩. ಶಾಂತರಸ, ಸಣ್ಣಗೌಡಸಾನಿ, ಸರಸ್ವತಿ ಗೋದಾಮು, ಗುಲಬರ್ಗಾ, ೧೯೯೮.


## ಪರಾಮರ್ಶನ ಗ್ರಂಥಗಳು


೧. ಅಮರೇಶ ನುಗಡೋಣಿ, ತತ್ವಪದ ಸಾಹಿತ್ಯ ಅಧ್ಯಯನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪.

೨. ಅಮರೇಶ ನುಗಡೋಣಿ, ಮಹಾಂತೇಶ ಮಸ್ಕಿ(ಸಂ.), ಅಮರಚಿಂತ(ಅಭಿನಂದನ ಗ್ರಂಥ), ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ರಾಯಚೂರು, ೨೦೧೫.

೩. ಅಮರೇಶ ನುಗಡೋಣಿ, ಹೈದರಾಬಾದು ಕರ್ನಾಟಕದ ಹಾಡು-ಪಾಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೪. ಕಾಳೇಗೌಡ ನಾಗವಾರ್, ಎನ್ ಹುಚ್ಚಪ್ಪ ಮಾಸ್ತರ., ಗಿರಿಜನ ಸಂಸ್ಕೃತಿ, ಕರ್ನಾಟಕ ಜನಪದ ಮತ್ತು ಯಕ್ಷಗಾನ ಅಕಾಡೆಮಿ.೨೦೦೦.

೫. ಖಂಡೋಬ ಪಿ.ಕೆ., ಕರ್ನಾಟಕ ಬುಡಕಟ್ಟಿನ ಲಂಬಾಣಿಗಳು, ಶ್ರೀ ಸಿದ್ಧಲಿಂಗೇಶ್ವರ ಬುಕ್ ಡಿಪ್ಪೋ, ಗುಲ್ಬರ್ಗ,೨೦೦೦.

೬. ಗಿರಡ್ಡಿ ಗೋವಿಂದರಾಜ, ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೧೦.

೭. ಧ್ರುವನಾರಾಯಣ, ಹೈದರಾಬಾದ ಕರ್ನಾಟಕದಲ್ಲಿ ಕನ್ನಡ ಕಟ್ಟಿದವರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೧೧.

೮. ರಮೇಶ್ ಸ.ಚಿ., ಅಲೆಮಾರಿಗಳ ಸ್ಥಿತಿಗತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ, ೨೦೦೫.

೯. ಲಕ್ಕಪ್ಪಗೌಡ ಎಚ್.ಜೆ., ಕರ್ನಾಟಕ ಬುಡಕಟ್ಟುಗಳು, ಸಂಪುಟ-೨, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಕನ್ನಡ ಭವನ, ಬೆಂಗಳೂರು.

